# ನಿಮಗೆ ಯಾವುದು ಸೂಕ್ತ? ಆಯ್ದುಕೊಳ್ಳಿ! ಆರಂಭಿಸಿರಿ!!

ಸುಪ್ರಸಿದ್ಧ ಸುಕ್ಷೇತ್ರ ಸಿದ್ಧಗಂಗಾ. ಇಲ್ಲಿ ಎಡೆಬಿಡದೆ ನಡೆಯುತ್ತಿರುವ ತ್ರಿವಿಧ ದಾಸೋಹಗಳು ಎಲ್ಲೆಲ್ಲೂ ಜನಜನಿತ. ಹಲವಾರು ದಶಕಗಳ ಸಾರ್ವಜನಿಕ ಸೇವೆ ಎಲ್ಲರನ್ನೂ ಆಕರ್ಷಿಸಿದೆ. ಅದರ ಪ್ರತಿಷ್ಠೆಯನ್ನು ಹೆಚ್ಚಿಸಿದೆ.

ಮೆಚ್ಚಿದ ಮಹನೀಯರು ನಿಂತು ಬೆಂಬಲಿಸುತ್ತಿದ್ದಾರೆ. ಕೊಡುಗೈ ದೊರೆಗಳಾಗಿ ನೀಡುತ್ತಿದ್ದಾರೆ. ಅನೇಕರು ಅನೇಕ ವಿಧಗಳಲ್ಲಿ ಈ ಬೃಹತ್ಪ್ರಮಾಣದ ಮಹತ್ಕಾರ್ಯಕ್ಕೆ ನೆರವಾಗುತ್ತಿದ್ದಾರೆ. "ಸಾರ್ವಜನಿಕರ ನೆರವೇ ಸಂಸ್ಥೆಯ ಮಹಾನಿಧಿ" ಎಂಬುದಾಗಿ **ಶ್ರೀ ಶ್ರೀ ಗಳವರೇ** ಸಾರಿ ಸಾರಿ ಹೇಳಿದ್ದಾರೆ. ನಾವು ನೀವು ದಾನಪವಿತ್ರ ಪಾತ್ರತ್ವವನ್ನು ಇಲ್ಲಿ ಹೊಂದುತ್ತೇವೆ. ಈ ಮಹಾಶಯರುಗಳಿಗೆ '**ಸಿದ್ಧಗಂಗಾ**' ತುಂಬು ಧನ್ಯವಾದಗಳನ್ನು ಅರ್ಪಿಸುತ್ತದೆ.

**ಧಾನ್ಯ ಸಂಗ್ರಹಣೆ:**

ಪ್ರತಿವರ್ಷ ಸುಗ್ಗಿಯಲ್ಲಿ ಇಂತಿಷ್ಟು ಧಾನ್ಯ ಮುಡುಪಾಗಿಡಿ.
ನೀವು ಬಂದಾಗ ತಂದು ಅರ್ಪಿಸಿರಿ, ಅಥವಾ ಕ್ಷೇತ್ರದ ಪ್ರತಿನಿಧಿಗಳು ಬಂದಾಗ ಒಪ್ಪಿಸಿರಿ
ನೀವು ನೀಡಿದ ತೆನೆಗಳು ಕೂಡಿ ರಾಶಿಯಾಗಿ ದಾಸೋಹಕ್ಕೆ ವಿನಿಯೋಗವಾಗಲಿ.

**ಧನ ಸಹಾಯ:**

ಪ್ರತಿ ತಿಂಗಳೂ ಯಥಾಶಕ್ತಿ ನಿಮ್ಮ ಕಾಣಿಕೆ ಕಳಿಸಿರಿ
ನಿಮ್ಮ ಖಾತೆ ಇರುವ ಬ್ಯಾಂಕಿನಲ್ಲಿ ಶ್ರೀ ಕ್ಷೇತ್ರದ ಖಾತೆ ಇರುತ್ತೆ.
ಪ್ರತಿ ತಿಂಗಳೂ ನಿಮ್ಮ ಖಾತೆಯಿಂದ ಶ್ರೀಗಳವರ ಖಾತೆಗೆ ವರ್ಗಾಯಿಸಲು ಬ್ಯಾಂಕ್ ಮೇನೇಜರ್ ರವರಿಗೆ ಒಂದು ಪತ್ರ ಬರೆಯಿರಿ.
ನಿಮಗೆ ಶ್ರಮವಿಲ್ಲದೆ ನಿಮ್ಮ ಕಾಣಿಕೆ ಸಂದಾಯವಾಗುತ್ತದೆ.
ವರ್ಷಕ್ಕೊಮ್ಮೆ ನಿಮ್ಮಿಂದ ಸಂದಾಯವಾದ ಒಟ್ಟು ಕಾಣಿಕೆಯ ಬಗ್ಗೆ ಪತ್ರ ಬರುತ್ತೆ.

**ಕೂಡಿಟ್ಟು ಕಳುಹಿಸಿರಿ:**

ಒಂದೇ ಬಾರಿಗೆ ಇಂತಿಷ್ಟೆಂದು ದಾನ ನೀಡುವುದು ಹಲವರಿಗೆ ಅಸಾಧ್ಯ.
ಹಾಗಿದ್ದಲ್ಲಿ ಶ್ರೀ ಕ್ಷೇತ್ರದ ಒಂದು ಹುಂಡಿಯನ್ನು ನಿಮ್ಮ ಮನೆಯಲ್ಲಿಡಿರಿ,
ನಿತ್ಯ ಎಷ್ಟು ಸಾಧ್ಯವೋ ಅಷ್ಟನ್ನು ಹಾಕಿ ವರ್ಷಕ್ಕೊಮ್ಮೆ ಶ್ರೀ ಮಠಕ್ಕೆ ಕಳಿಸಿರಿ.
ಯಾವುದೇ ಹಣ ಕಳಿಸುವವರು. ಎಂ. ಒ. ಬ್ಯಾಂಕ್ ಡ್ರಾಫ್ಟ್ ಆರ್ಡರುಗಳನ್ನು
**ಶ್ರೀ ಶ್ರೀ ಶಿವಕುಮಾರಸ್ವಾಮಿಗಳು,** ಶ್ರೀಕ್ಷೇತ್ರಸಿದ್ಧಗಂಗಾಮಠ, ತುಮಕೂರು ಜಿಲ್ಲಾ-572131 ಇವರಿಗೆ ನೇರವಾಗಿ ಕಳುಹಿಸಬೇಕು.

ಸಹಸ್ರಾರು ಬಡಮಕ್ಕಳ ಆಶ್ರಯ ಕೇಂದ್ರ "**ಶ್ರೀ ಸಿದ್ಧಗಂಗಾ**" ಇಲ್ಲಿಗೆ ನೀಡಿದ ಉದಾರ ಸ್ವರೂಪದ ನಿಮ್ಮ ದಾನ ನಿತ್ಯದಾಸೋಹಕ್ಕೆ ವಿನಿಯೋಗವಾಗುತ್ತದೆ. ನೀಡಿರಿ ನಿತ್ಯಸಂತೋಷವನ್ನು ಹೊಂದಿರಿ.

ಭಕ್ತಮಂಡಲಿ
ಶ್ರೀ ಸಿದ್ಧಗಂಗಾ ಕ್ಷೇತ್ರ



# ಶ್ರೀವಾಣಿ

ಮಾತಿಗೆ ಮನೆ ಕಟ್ಟಿ ಬೆಳೆಸುವ, ಮನೆ ಸುಟ್ಟು ಬೂದಿ ಮಾಡುವ ಎರಡೂ ಶಕ್ತಿಗಳಿವೆ. ಇದನ್ನರಿತು ಮಾನವ ಮಾತನ್ನು ಮಾನವೀಯತೆಯಿಂದ ಬಾಳಲು ಸೃಷ್ಟ್ಯಾತ್ಮಕ ಶಕ್ತಿಯನ್ನಾಗಿ ಉಪಯೋಗಿಸಬೇಕು.

ಪ್ರಪಂಚದಲ್ಲಿ ಬಹಳ ಮಂದಿ ಪರಿಪೂರ್ಣ ಜೀವನದ ಅರ್ಥಮಾಡಿಕೊಂಡಿಲ್ಲ. ಅಪರಿಪೂರ್ಣ ಜೀವನವನ್ನೇ ಪರಿಪೂರ್ಣ ಎಂಬ ಭ್ರಾಂತಿಯಿಂದ ಮನಗಂಡು ಬಾಳುವೆ ಸಾಗಿಸುತ್ತಿದ್ದಾರೆ. ಯಾವುದನ್ನ ಪಡೆದರೆ ಜಗತ್ತಿನ ಸಕಲವೂ ಸುಲಭವಾಗಿ ದೊರಕುವುದೋ ಅಂತಹ ಭಗವಂತನ ಸಾಕ್ಷಾತ್ಕಾರ ಪಡೆದುದೇ ಪರಿಪೂರ್ಣ ಜೀವನ.

ಆತ್ಮ ಪರಮಾತ್ಮನನ್ನು ಸೇರುವುದೇ ಮುಖ್ಯ ತತ್ವ. ಅದೇ ಕೈವಲ್ಯ, ಮೋಕ್ಷ. ಜ್ಞಾನ ಶ್ರೇಷ್ಠ, ರತ್ನ, ನಿಜವಾದ ಆಭರಣ, ಅತ್ಯಮೂಲ್ಯ ವಸ್ತು. ಮನುಷ್ಯನನ್ನು ಪ್ರಾಣಿಗಳಿಂದ ಪ್ರತ್ಯೇಕಿಸುವ ಶ್ರೇಷ್ಠ ತತ್ವ ಜ್ಞಾನ. ಪರಮಾತ್ಮ ಮನುಷ್ಯನಿಗೆ ಜ್ಞಾನ ಕರುಣಿಸಿ ಸೃಷ್ಟಿಯಲ್ಲಿ ಮನುಷ್ಯನಿಗೆ ಪ್ರಥಮ ಸ್ಥಾನವನ್ನು ದೊರಕಿಸಿದ. ಆದ್ದರಿಂದಲೇ ಮಾನವ ಸೃಷ್ಟಿಯ ಕಿರೀಟಪ್ರಾಯವೆನಿಸಿದ್ದಾನೆ. ಜ್ಞಾನಾಭಿವೃದ್ಧಿ ಮಾಡಿಕೊಂಡು ಜೀವನದಲ್ಲಿ ಬೆಳಕು ಕಾಣುವುದೇ ಮಾನವನ ಗುರಿ.

ಪರಮಾತ್ಮನ ಅಗಾಧ ಶಕ್ತಿ ಸೃಷ್ಟಿಯಲ್ಲಿ ಗೋಚರವಾಗುತ್ತಿದೆ. ಅಂತಹ ಸೃಷ್ಟಿಯನ್ನು ಅರ್ಥಮಾಡಿಕೊಳ್ಳುವುದು ಅಷ್ಟು ಸುಲಭವಲ್ಲ. ಪ್ರಾಯಶಃ ಮನುಷ್ಯನ ಯೋಚನಾ ಶಕ್ತಿಯನ್ನು ಮೀರಿರುವುದು. ತೀವ್ರ ಪ್ರಯತ್ನ ಮತ್ತು ಸಾಧನೆಯಿಂದ ಮಾತ್ರ ವಿಶ್ವ ರಹಸ್ಯವನ್ನು ಅರಿಯಲು ಸಾಧ್ಯ.

ಪವಿತ್ರ ಕೃತಿ, ಪವಿತ್ರ ವಾಣಿ, ಪವಿತ್ರ ವಿಚಾರಗಳೇ ಜೀವಾತ್ಮನನ್ನು ಪರಮಾತ್ಮನ ಕಡೆ ಒಯ್ಯುತ್ತವೆ. ಅಪವಿತ್ರ ಕೃತ್ಯ, ಅಪವಿತ್ರ ವಾಣಿ, ಅಶುದ್ಧ ವಿಚಾರಗಳು ಜೀವಾತ್ಮ-ಪರಮಾತ್ಮರ ನಡುವಣ ಅಂತರವನ್ನು ಹೆಚ್ಚಿಸುತ್ತವೆ.

# 'ಸಿದ್ಧಗಂಗಾ'

ಮೇ, ೧೯೭೭

ಸಂಪುಟ–೧೩ ಸಂಚಿಕೆ–೫


ಪ್ರಕಾಶಕರು
ಹೆಚ್. ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

ಸಂಪಾದಕರು
ಪಂ॥ ಚನ್ನಪ್ಪ ಎರೇಸೀಮೆ
ಕೆ. ಜಿ. ರಂಗಯ್ಯ

ಜಾಹೀರಾತು ವ್ಯವಸ್ಥಾಪಕರು
ಎಂ. ರೇಣುಕಾರಾಧ್ಯ

ಮುದ್ರಕರು
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ

ಪ್ರಕಟನೆಯ ಸ್ಥಳ
ಶ್ರೀ ಸಿದ್ಧಗಂಗಾ ಕ್ಷೇತ್ರ


ಚಂದಾ ವಿವರ

ವಾರ್ಷಿಕ ಚಂದಾ: 10 ರೂ
ಆಜೀವ ಸದಸ್ಯತ್ವ: 101 ರೂ

## ಈ ಸಂಚಿಕೆಯಲ್ಲಿ


| | |
|---|---|
| ಶ್ರೀವಾಣಿ | 3 |
| ನವನೀತ ಅಮೃತ ಬಿಂದು | 5 |
| ಶರಣರು ಕಂಡ ದೇವರು | 6 |
| ಜೀವನ ಕಲೆ | 10 |
| ಕಾವ್ಯವಾಹಿನಿ | 14 |
| ಕೊಂಡಿಗಳು | 15 |
| ಶರಣ ಬಸವೇಶ್ವರರು | 20 |
| ವಿಜ್ಞಾನ ಮತ್ತು ಕಲೆ | 22 |


### ಮುಖ ಪುಟ

ಅಖಿಲ ಕರ್ನಾಟಕದ ಭಾವೈಕ್ಯಕ್ಕಾಗಿ 62 ವರ್ಷಗಳ ಹಿಂದೆ ಸ್ಥಾಪಿತಗೊಂಡ ಕಾರ್ಯ ಸೌಧ ಕನ್ನಡ ಸಾಹಿತ್ಯ ಪರಿಷತ್ತು.

### ಓದುಗರಲ್ಲಿ ಮನವಿ

'ಸಿದ್ಧಗಂಗಾ' ಲೇಖಕರಿಂದ ಧಾರ್ಮಿಕ, ಸಾಂಸ್ಕೃತಿಕ ಐತಿಹಾಸಿಕ ಹಾಗೂ ವೈಚಾರಿಕ ಲೇಖನಗಳು ಸಣ್ಣ ಕಥೆ, ಕವನ, ಪ್ರಬಂಧ ಇವುಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್‌ಸ್ಕೇಪ್ ಸೈಜಿನ 3 ಪುಟಗಳಿಗೆ ಮೀರದಂತಿದ್ದು ಕಾಗದದ ಒಂದೇ ಮಗ್ಗುಲಲ್ಲಿ ಬರೆಯಲ್ಪಟ್ಟಿರಬೇಕು. ಅಸ್ವೀಕೃತ ಲೇಖನಗಳನ್ನು ಹಿಂದಿರುಗಿಸಲಾಗುವುದಿಲ್ಲ. ಸ್ವೀಕೃತ ಲೇಖನಗಳಿಗೆ 'ಸಿದ್ಧಗಂಗಾ' ಆಗ್ಗಿಂದಾಗ್ಗೆ ನಿಗದಿಪಡಿಸಿಕೊಳ್ಳುವ ಸಂಭಾವನೆಯನ್ನು ನೀಡಲಾಗುವುದು. ಲೇಖನಗಳನ್ನು

"ಸಂಪಾದಕರು"
'ಸಿದ್ಧಗಂಗಾ' [ಕನ್ನಡ ಮಾಸ ಪತ್ರಿಕೆ]
ಶ್ರೀ ಸಿದ್ಧಗಂಗಾ ಕ್ಷೇತ್ರ –572131 ತುಮಕೂರು ಜಿಲ್ಲೆ
ಇವರಿಗೆ ಕಳಿಸಿ ಕೊಡಬೇಕಾಗಿ ಪ್ರಾರ್ಥನೆ.

### ಚಂದಾದಾರರಲ್ಲಿ ಮನವಿ

ನಿಮ್ಮ ಚಂದಾ ಅವಧಿ ಮುಗಿಯುವವರೆಗೆ ವಿಳಾಸ ಬದಲಾವಣೆ ಮತ್ತು ಇತರೆ ಬಗ್ಗೆ ವ್ಯವಹರಿಸುವಾಗ ವಿಳಾಸದ ಹಿಂಬದಿ ಇರುವ ಕ್ರಮಾಂಕ ಅಥವಾ ಯಾರ ಮೂಲಕ ಸದಸ್ಯತ್ವ ಪಡೆದಿರುವಿರೋ ಆ ನಮ್ಮ ಪ್ರತಿನಿಧಿಗಳ ಹೆಸರನ್ನು ಸೂಚಿಸಿ ಪತ್ರ ಬರೆಯಿರಿ.

ಚಂದಾ ಅವಧಿ ಮುಗಿದಿರುವ ಮಾನ್ಯ ಓದುಗರು ನೂತನ ಸಾಲಿಗೆ ಮುಂದುವರಿಸಿಕೊಳ್ಳಬೇಕಾಗಿ ವಿನಂತಿ.

ಚಂದಾ ಬಾಕಿ ಇರುವವರು ಸಂದಾಯ ಮಾಡಿ 'ಸಿದ್ಧಗಂಗಾ' ಮುನ್ನಡೆಗೆ ಸಹಕರಿಸಿ.

ಪ್ರಕಾಶಕರು
'ಸಿದ್ಧಗಂಗಾ' ಮಾಸ ಪತ್ರಿಕೆ, ಸಿದ್ಧಗಂಗಾಮಠ–572131, ತುಮಕೂರು ಜಿಲ್ಲೆ

# ನವನೀತ

(ಸಂಸ್ಕೃತ ಶ್ಲೋಕಗಳ ಭಾವಾನುವಾದ)

**ಪಯಃ ಪಾನಂ ಭುಜಂಗಾನಾಂ ಕೇವಲಮ್ ವಿಷವರ್ಧನಮ್ ।**
**ಉಪದೇಶೋ ಹಿ ಮೂರ್ಖಾಣಾಂ ಪ್ರಕೋಪಾಯ ನ ಶಾಂತಯೇ ॥**

ಹಾಲನೆರೆದರು ಹಾವಿಗೆಂದೆಂದು ಕೂಡ
ವಿಷವರ್ಧನೆಗೆ ಮೂಲ; ಸುಧೆಗದಲ್ಲ.
ಮೂರ್ಖನಿಗೆ ನೀ ಕೊಡುವ ಉಪದೇಶ ಕೂಡ
ಕೋಪಕ್ಕೆ ನಾಂದಿಯದು; ಶಾಂತಿಗಲ್ಲ.



**ಜೀವನಗ್ರಹಣೇ ನಮ್ರಾಃ ಗೃಹೀತ್ವಾ ಪುನರುನ್ನತಾಃ ।**
**ಕಿಂ ಕನಿಷ್ಠಾ ಕಿಮು ಜ್ಯೇಷ್ಠಾ ಘಟೀತ್ರಯಂಸ್ಯ ದುರ್ಜನಾಃ ॥**

ತಲೆಬಾಗಿ ತಿರಿದುಂಡು ಬಳಿಕ ಮೆರೆವ
ಮನುಜನೇ ದುರ್ಜನನು; ಇದು ಸತ್ಯವಣ್ಣ
ಬಗ್ಗಿ ನೀರ್ಕುಡಿದೆದ್ದು ಸೆಟೆದು ನಿಲುವ
'ಏತ ನಿಗೆ ಅವ ತಮ್ಮನಥವ ಅಣ್ಣ.



**ಶತ್ರುಣಾ ನ ಹಿ ಸಂದಧ್ಯಾತ್ಸುಶ್ಲಿಷ್ಟೇನಾಪಿ ಸಂಧಿನಾ ।**
**ಸುತಪ್ತಮಪಿ ಪಾನೀಯಂ ಶಮಯತ್ಯೇವ ಪಾವಕಃ ॥**

ಉಪದೇಶಿಸಲ್ಪಟ್ಟ ಹಗೆಯೊಡನೆ ಕೂಡ
ಗೆಳೆತನದ ಸಂಧಿ—ಒಪ್ಪಂದ ಬೇಡ.
ಬೆಂಕಿಯಿಂದಲೇ ಕಾದ ಬಿಸಿ ನೀರು ತಾನು
ಬೆಂಕಿಯನ್ನಾರಿಸದೆ ಇರುವುದೇನು ?

—'ಕಾವ್ಯಸುಧಾಪ್ರಿಯ'

## ಅಮೃತ ಬಿಂದು

'ಸತ್ಯಮೇವ ಜಯತೇ ನಾನೃತಂ'! ಎಂದೆಂದಿಗೂ ಸತ್ಯಕ್ಕೇ ಜಯ; ಅಸತ್ಯಕ್ಕಲ್ಲ, ಸತ್ಯದ ಸುದ್ದಿ ಎತ್ತಿದೊಡನೆ ಹರಿಶ್ಚಂದ್ರ ನೆನಪಿಗೆ ಬರುತ್ತಾನೆ. ಅವನನ್ನು ಸತ್ಯಕ್ಕೆ ಮತ್ತೊಂದು ಹೆಸರೆಂತಲೂ ಭಾವಿಸುವುದುಂಟು. ಸತ್ಯದುಳಿವಿಗಾಗಿ ಸತಿಶಿರೋಮಣಿಯನ್ನೇ ವಿಕ್ರಯಿಸಲು ಸಿದ್ಧನಾದ ಅವನು. ಸತಿ-ಸುತ, ದೇಶ--ಕೋಶಾದಿಗಳೂ ಅವನಿಗೆ ಸತ್ಯದ ಮುಂದೆ ತೃಣಸಮಾನವಾದವು. ಅಂತಹ ಹರಿಶ್ಚಂದ್ರನ ಸತ್ಯನಿಷ್ಠೆಯಿಂದ ಪ್ರಭಾವಿತರಾದವರು ಪೂಜ್ಯ ಬಾಪೂಜಿ ಸತ್ಯ, ಅಹಿಂಸೆ, ಬ್ರಹ್ಮಚರ್ಯೆ ಅಸಂಗ್ರಹ, ಕದಿಯದಿರುವಿಕೆ, ಶಿಸ್ತು, ನಿಷ್ಠೆ, ಸಂಯಮ, ಸೇವೆ........ ಇನ್ನೂ ಅನೇಕಾನೇಕ ಗುಣಗಳ ಗಣಿ ಎನಿಸಿದ್ದ ಬಾಪೂಜಿ ಸತ್ಯ ಮತ್ತು ಅಹಿಂಸೆಗಳಿಗೆ ಅತಿ ಹೆಚ್ಚಿನ ಆದ್ಯತೆ ನೀಡಿದುದು ಅವುಗಳ ಹಿರಿಮೆಯಿಂದ. ಸತ್ಯಕ್ಕೆ ಎಂದೆಂದಿಗೂ ಭಯವಿಲ್ಲ; ಅದು ಹಗಲು ಅಸತ್ಯ ಭೀರು; ಅದು ಕತ್ತಲು. ಮಾಡಿದ ದುಷ್ಕೃತ್ಯವನ್ನು ಸಮರ್ಥಿಸಿಕೊಳ್ಳುವಲ್ಲಿ ಆಡುವ ಒಂದು ಅಸತ್ಯ, ಅಸತ್ಯಗಳ ಸರಮಾಲೆಯನ್ನೇ ತಂದೊಡ್ಡುತ್ತದೆ. ಅಂತಹ ಸಂದರ್ಭದಲ್ಲಿ ಸತ್ಯವಾಡಿ ನಿವೇದಿಸಿಕೊಂಡಲ್ಲಿ ಅಪರಾಧ ಪರಂಪರೆಯ ಸರಪಳಿ ಕಡಿದು ಬೀಳುತ್ತದೆ. ಸತ್ಯವನ್ನಾಡಿದಾಗ ಮನಸ್ಸಿಗೆ ಸಿಗುವ ನೆಮ್ಮದಿ ಅಸತ್ಯವನ್ನಾಡಿದಾಗ ಎಲ್ಲಿ ಸಿಗುತ್ತದೆ? ಸತ್ಯಕ್ಕೂ ಅಸತ್ಯಕ್ಕೂ ಅಂತರವೆಷ್ಟೆಂದು ಪ್ರಶ್ನಿಸಿದಾಗ ಕೇವಲ ಮೂರು ಬೆಟ್ಟುಗಳ ಅಂತರ– ಕಣ್ಣಿಗೂ, ಕಿವಿಗೂ ಮಧ್ಯದ ಅಂತರ ಎಂದು ಚಮತ್ಕಾರವಾಗಿ ಉತ್ತರಿಸಿದ ಬೀರಬಲ್ಲನ ಕಥೆ ಸಾರುವುದೇನು? ಕಂಡದ್ದು ಸತ್ಯ, ಅಪ್ಪಟ ಸತ್ಯ; ಕೇಳಿದ್ದು ಸತ್ಯವಾಗಿದ್ದರೂ ಇರಬಹುದು ಇಲ್ಲವಾದರೂ ಇರಬಹುದು. ಅಂತೆಯೇ ಸತ್ಯಕ್ಕೆ ಸಾವಿಲ್ಲ; ಅದು ಅಮರ.

—'ದುಂಬಿ'

# ಶರಣರು ಕಂಡ ದೇವರು

—ಪೂಜ್ಯ ಶ್ರೀ ಮಾತೆ ಮಹಾದೇವಿಯವರು.

ದೇವರ ಕಲ್ಪನೆಯೇ ಧರ್ಮದ ಜೀವಾಳ.
ದೇವ ದೇವನ ಸೃಷ್ಟಿಯೇ ಈ ಜಗತ್ತು.
ಅವನ ಲೀಲೆಯೇ ನಮ್ಮ ಕ್ರಿಯೆ.

## ದೈವದ ಕಲ್ಪನೆ :

ಧರ್ಮಗಳಲ್ಲಿ ದೇವನ ಕಲ್ಪನೆ ಮೂಲಭೂತವಾದುದು. ಆದಿಮಾನವನಿಂದ ಹಿಡಿದು ಆಧುನಿಕ ಮಾನವನವರೆಗೆ ಹಾಸುಹೊಕ್ಕಾಗಿ ಬಂದ ಈ ಕಲ್ಪನೆ, ಧರ್ಮದ ಜೀವಾಳ. ಧರ್ಮಗಳಲ್ಲಿ ಎರಡು ವಿಧ,ಸೇಶ್ವರವಾದಿ ಮತ್ತು ನಿರೀಶ್ವರವಾದಿ. ಸೃಷ್ಟಿಗೆ ಒಬ್ಬ ಕರ್ತನನ್ನು ಒಪ್ಪುವ ಲಿಂಗಾಯತ, ವೈದಿಕ, ಸಿಖ್, ಕ್ರಿಶ್ಚಿಯನ್, ಇತ್ಯಾದಿ ಧರ್ಮಗಳು ಸೇಶ್ವರವಾದಿ ಧರ್ಮಗಳಾದರೆ; ಜಗತ್ತು ಅನಾದಿಯೆಂದು, ಇದಕ್ಕೆ ಕರ್ತನಿಲ್ಲವೆಂದು ಹೇಳುವ ಜೈನ, ಬೌದ್ಧ ಧರ್ಮಗಳು ನಿರೀಶ್ವರವಾದಿ ಧರ್ಮಗಳು ರೂಢಿಯಲ್ಲಿ ಇವುಗಳನ್ನು ನಾಸ್ತಿಕ ಧರ್ಮಗಳೆಂದು ಮತ್ತು ಸೇಶ್ವರವಾದಿ ಧರ್ಮಗಳನ್ನು ಆಸ್ತಿಕ ಧರ್ಮಗಳೆಂದು ಕರೆದರೂ, ಈ ಬಗೆಯ ಕರೆಯುವಿಕೆ ಸೂಕ್ತವಾಗದು ಏಕೆಂದರೆ ಜಿನ, ಬೌದ್ಧ ಧರ್ಮಗಳು ಸೃಷ್ಟಿಕರ್ತನನ್ನು ಒಪ್ಪದಿದ್ದರೂ, ಆತ್ಮವನ್ನೂ, ಮುಕ್ತಿಯನ್ನೂ ಮನ್ನಿಸುತ್ತವೆ. ನಾಸ್ತಿಕತೆಯು ಕರ್ತ,ಆತ್ಮ, ಮುಕ್ತಿ ಈ ಯಾವುದನ್ನೂ ಒಪ್ಪುವುದಿಲ್ಲ. ಆದ್ದರಿಂದ, ಕೇವಲ ಜಡವೊಂದನ್ನೇ ನಂಬದೆ ಚೈತನ್ಯದ ಆಧಿಕ್ಯವನ್ನೂ ಆತ್ಮ ಅಥವಾ ಪರಮಾತ್ಮರೂಪದಲ್ಲಿ ನಂಬುವ ಧರ್ಮಗಳನ್ನು ಆಸ್ತಿಕ ಧರ್ಮಗಳು ಎಂದೇ ಭಾವಿಸೋಣ. ಆದರೆ ಪರಮಾತ್ಮನನ್ನು ಆದಿಕಾರಣವಾಗಿ ಒಪ್ಪುವ ಧರ್ಮಗಳನ್ನು ಸೇಶ್ವರವಾದಿ ಧರ್ಮಗಳೆಂದೂ, ಮತ್ತು ಕೇವಲ ಆತ್ಮರನ್ನು ಒಪ್ಪುವ ಧರ್ಮಗಳನ್ನು ನಿರೀಶ್ವರವಾದಿ ಧರ್ಮಗಳೆಂದು ಒಪ್ಪೋಣ.

## ಕರ್ತನೋರ್ವ :

ಸೇಶ್ವರವಾದಿ ಧರ್ಮಗಳ ಮೂಲಭೂತ ತತ್ವ 'ದೇವರು'. ಈ ತತ್ವದ ಮೇಲೆಯೇ ಆ ಸಮಾಜದ ದೃಷ್ಟಿಕೋನದಿಂದ ಹಿಡಿದು, ನಡೆ–ನುಡಿ, ಸಮಾಜಶಾಸ್ತ್ರ, ಅರ್ಥಶಾಸ್ತ್ರ, ಎಲ್ಲವೂ ನಿರ್ಣಯಿಸಲ್ಪಡುವುವು. ಲಿಂಗಾಯಿತ ಧರ್ಮವು ಆಸ್ತಿಕ ಧರ್ಮ, ಸೇಶ್ವರವಾದಿ ಧರ್ಮ ಭಕ್ತಿಯೇ ಬದುಕಿನ ಜೀವಾಳವಾದರೆ, ಪರಮಾತ್ಮನೊಡನೆ ಮಿಲನವೇ ಬದುಕಿನ ಅತ್ಯಂತಿಕ ಗುರಿ ಎಂದು ಘೋಷಿಸುವ ಧರ್ಮವಿದು. ಇಂತಹ ಧರ್ಮದಲ್ಲಿ ಬರುವ ದೇವರ ಕಲ್ಪನೆ ಏನು ಎಂಬುದನ್ನು ವಿವೇಚಿಸುವುದೇ ಪ್ರಸ್ತುತ ಲೇಖನದ ಉದ್ದೇಶ.

ಸ್ವಾಮಿ ನೀನು, ಶಾಶ್ವತ ನೀನು
ಎತ್ತಿದೆ ಬಿರುದ ಜಗವೆಲ್ಲವರಿಯಲು
ಮಹಾದೇವ, ಮಹಾದೇವಾ;
ಇಲ್ಲಿಂದ ಮುಂದೆ ಶಬ್ದವಿಲ್ಲ.
ಪಶುಪತಿ ಜಗಕ್ಕೆ ಏಕೋದೇವ
ಸ್ವರ್ಗ ಮರ್ತ್ಯ ಪಾತಾಳದೊಳಗೆ
ಒಬ್ಬನೇ ದೇವ ಕೂಡಲ ಸಂಗಮದೇವ !

ಎಂಬ ಈ ವಚನದಲ್ಲಿ ಬಸವಣ್ಣನವರು ಈ ಜಗತ್ತಿಗೊಬ್ಬ ಕರ್ತನನ್ನು, ಶಾಶ್ವತನಾದ ಸ್ವಾಮಿಯನ್ನು ಒಪ್ಪುತ್ತಾರೆ. ಶರಣಧರ್ಮಾನುಯಾಯಿಯಾದ ಸರ್ವಜ್ಞನೂ ಸಹ ಈ ಜಗತ್ತನ್ನು ಶಿವನ ಸೃಷ್ಟಿ, ಈ ಕ್ರಿಯೆ ಶಿವನ ಲೀಲೆ ಎಂದು ವರ್ಣಿಸುತ್ತಾನೆ.

ಕಳ್ಳಿಯೊಳು ಹಾಲು, ಮುಳು । ಗಳ್ಳಿಯೊಳು ಹೆಜ್ಜೇನು
ಎಳ್ಳಿನೊಳಗೆಣ್ಣೆ ಹನಿದಿರಲು, ಶಿವಲೀಲೆ
ಸುಳ್ಳೆನ್ನ ಬಹುದೇ,– ಸರ್ವಜ್ಞ ॥

ಮರದೊಳಗೆ ಅಗ್ನಿಯನ್ನು, ನೊರೆ ಹಾಲೊಳಗೆ ಕಂಪುಳ್ಳ ತುಪ್ಪವನ್ನು, ಶರೀರದೊಳಗೆ ಆತ್ಮ ವನ್ನು ಗುಪ್ತವಾಗಿ, ಸುಪ್ತವಾಗಿ, ಅವ್ಯಕ್ತವಾಗಿ ಹುದುಗಿ ಸಿರುವ ಲೀಲೆಗೆ ಬೆರಗಾಗಿ ದೇವರ ಉಪಾಸಿಮಯ್ಯನವರು ದೇವನ ಅಸ್ತಿತ್ವವನ್ನು ಮನ್ನಿಸುತ್ತಾರೆ.

**ಸ್ವರೂಪತ್ರಯ :**

ಇಂತಹ ಪರಮಾತ್ಮನನ್ನು ವಚನಶಾಸ್ತ್ರದಲ್ಲಿ ಪರಶಿವ, ಪರಬ್ರಹ್ಮ ಎಂದು ಕರೆಯುತ್ತಾರೆ. ವಚನ ಶಾಸ್ತ್ರದಲ್ಲಿ ಶಿವ ಶಬ್ದವನ್ನು ಮೂರು ಪ್ರಕಾರವಾಗಿ ಬಳಸಿ ಕೊಳ್ಳುವುದನ್ನು ಗಮನಿಸಬಹುದು. 1) ಪೌರಾಣಿಕ ಮೂರ್ತಿ 2) ಐತಿಹಾಸಿಕವ್ಯಕ್ತಿ 3) ತಾತ್ವಿಕ ಶಕ್ತಿ; ಈ ಮೂರು ತತ್ವಗಳನ್ನುವಿಶ್ಲೇಷಿರುವುದನ್ನು ಕಾಣು ತ್ತೇವೆ. ಐತಿಹಾಸಿಕ ವ್ಯಕ್ತಿತ್ವವಿಲ್ಲದೆ ಕೇವಲ ಪೌರಾಣಿಕ ಉಕ್ತಿಗಳಲ್ಲಿ ಮಾತ್ರ ಬರುವ ಮೂರ್ತಿಯನ್ನು ಶರಣರು ಒಪ್ಪುವುದಿಲ್ಲ, ಮನ್ನಿಸುವುದಿಲ್ಲ ಪೂಜಿಸುವುದಿಲ್ಲ.

ಕೈಲಾಸವೆಂಬುದೊಂದು ಹಾಳು ಬೆಟ್ಟ ಕಾಣಿರೋ
ಅಲ್ಲಿರುವ ಶಿವನೊಬ್ಬ ಹೆಡ್ಡ ಕಾಣಿರೋ
ಅಲ್ಲಿರುವ ಮುನಿಗಳೆಲ್ಲ ಜೀವಗಳ್ಳರು.

ಎಂದು ಹೇಳುವ ಸಿದ್ಧರಾಮೇಶ್ವರರ ವಚನದಲ್ಲಿ ಪೌರಾಣಿಕ, ಅನೈತಿಹಾಸಿಕ ವ್ಯಕ್ತಿಯನ್ನು ಅಲ್ಲಗಳೆಯು ವುದನ್ನು ಕಾಣಬಹುದು.

ಶಿವನನ್ನು ಐತಿಹಾಸಿಕ ವ್ಯಕ್ತಿಯನ್ನಾಗಿ ಕಂಡು, ಯೋಗಿರಾಜನಾದ ಶಿವನು ಶೈವ ಧರ್ಮದ ಆದಿಗುರು ಎಂದು ನಂಬುವುದನ್ನು ಬಸವಣ್ಣನವರ ವಚನದಲ್ಲಿ ಕಾಣುತ್ತೇವೆ. "ನಿಮ್ಮ ಪರಂಪರೆ (Tradition) ಯಾವುದು?" ಎಂದು ಯಾರಾದರೂ ಪ್ರಶ್ನಿಸಿರುವ ಸಂಭವ ವುಂಟು. ಆಗ ಬಸವಣ್ಣನವರು,

ಹರನು ಮೂಲಿಗನಾಗಿ, ಪುರಾತರೊಳಗಾಗಿ
ಬಳಿ ಬಳಿಯಲು ಬಂದ ಮಾದಾರನ ಮಗನಾನಯ್ಯ

ಎಂದು ನುಡಿದು, ತಮಗೆ ಸ್ಫೂರ್ತಿ ಸಿಕ್ಕುದು ಹರ ಪರಂಪ ರೆಯಿಂದ ಎಂದು ಹೇಳುವರು. ಪಂಚವಿಂಶತಿ ಲೀಲೆಗ ಳನ್ನು ಮಾಡಿದವರು ಐತಿಹಾಸಿಕ ವ್ಯಕ್ತಿಗಳು, ಗಣೇಶ್ವ ರರು ಎಂಬ ಭಾವ ಪ್ರಭುದೇವರ ವಚನದಲ್ಲಿ ಸ್ಫುಟ ವಾಗಿ ತಿಳಿದುಬರುವುದು.

ರುದ್ರನೆಂಬಾತನೊಬ್ಬ ಗಣೇಶ್ವರನು, ಭದ್ರನೆಂಬಾತನೊಬ್ಬ ಗಣೇಶ್ವರನು,
ಶಂಕರನೆಂಬಾತನೊಬ್ಬ ಗಣೇಶ್ವರನು...............
ಇವರೆಲ್ಲರು ಸಮ [illegible] ಅಡಗಿಪ್ಪರು.

ರುದ್ರ, ಭದ್ರ, ಶಶಿಧರ. ಶಂಕರ ಮುಂತಾದ ಮಹಾಪುರುಷರು ಕೇವಲ ಪೌರಾಣಿಕ ಕಲ್ಪನೆಯೂ ಅಲ್ಲ, ಅಥವಾ ತಾತ್ತ್ವಿಕ ಪರವಸ್ತುವೂ (Absolute Reality) ಅಲ್ಲ; ಅವರು ವಿಶಿಷ್ಟಕಾಲದಲ್ಲಿ ಹುಟ್ಟಿ, ಸಾಧನೆ ಮಾಡಿದ ಮಹಾನ್‌ವ್ಯಕ್ತಿಗಳು ಎಂಬ ಭಾವ ಮೇಲ್ಕಂಡ ವಚನದಲ್ಲಿ ಬಿಂಬಿತವಾಗಿದೆ. ಆದ್ದರಿಂದ ತಾತ್ವಿಕ ದೃಷ್ಟಿಯಿಂದ ಅಭ್ಯಸಿಸಿದಾಗ ಐತಿಹಾಸಿಕ ಶಿವ ನನ್ನು ಶರಣರು ಮನ್ನಿಸಿ, ಅಸ್ತಿತ್ವವನ್ನು ಒಪ್ಪಿ, ಗೌರ ವವನ್ನು ನೀಡಿದರೂ ಅವನನ್ನು ಪೂಜಿಸುವುದು ಕಾಣುವುದಿಲ್ಲ.

**ಮಹಾಚೈತನ್ಯ :**

ಐತಿಹಾಸಿಕ ವ್ಯಕ್ತಿಯನ್ನು ಶಿವನೆಂದು, ನಿರಾ ಕಾರ ನಿರ್ಗುಣನಾದ ಪರಂಜ್ಯೋತಿರೂಪಿ ಚೈತನ್ಯವನ್ನು ಪರಶಿವನೆಂದು ಸಂಬೋಧಿಸುವುದನ್ನು ಕಾಣುತ್ತೇವೆ. ಕೆಲವು ಸಂದರ್ಭದಲ್ಲಿ ಹರ, ಮಹಾಹರ ಎಂದ ಸಂಬೋಧಿಸಿರುವುದನ್ನು ಕಾಣುತ್ತೇವೆ.

ಹರ ಶಕ್ತಿ ಹುಟ್ಟದ ಬೆನಕ ಭೈರವ ಷಣ್ಮುಖರ
ಮಹಾಹರನ ಮಕ್ಕಳೆಂಬ ಪಾತಕ ನೀ ಕೇಳೊ
ಹರಿಹರನು ಒಂದೆಂಬ ಶಿವದ್ರೋಹಿ ನೀ ಕೇಳೊ
ಹರ ಸಹಿತಾರದಿಂದತ್ತ ಅಜಾತ, ಅಚರಿತ್ರ ಅಪ್ರತಿಮ
ಕೂಡಲ ಸಂಗಮ ದೇವನೊಬ್ಬನೆ ಕಾಣಿಭೋ!

ಐತಿಹಾಸಿಕ ಹರ ಮತ್ತು ಶಕ್ತಿಗಳ ಮಕ್ಕಳಾದ ಬೆನಕ, ಭೈರವ, ಷಣ್ಮುಖರು ಮಹಾ ಹರನ ಅಂದರೆ ಸೃಷ್ಟಿಕರ್ತನಾದ, ಮಹಾಚೈತನ್ಯದ (Absolute Reality) ಮಕ್ಕಳಲ್ಲ, ಐತಿಹಾಸಿಕವಾದ ಶರೀರ ಧಾರಿಗಳು. ಶರಣರ ಪ್ರಕಾರ ಹರ ಎಂಬ ಪದ, ಮಹಾಹರ, ಪರಶಿವ ಎಂಬ ಪದಗಳು ಸಂಕೇತಿಸುವುದು ಹುಟ್ಟು ಇಲ್ಲದ ಅಜಾತನನ್ನು, ಐತಿಹಾಸಿಕ ಚರಿತ್ರೆ ಇಲ್ಲದ ಅಚರಿತ್ರನನ್ನು, ಉಪಮಾತೀತ ಪರಮಾತ್ಮನನ್ನು ಇಂತಹ ತಾತ್ತ್ವಿಕ ಪರವಸ್ತುವನ್ನು ನಂಬಿ, ಮನ್ನಿಸಿ, ಪೂಜಿಸುತ್ತಾರೆ. ಹಲವಾರು ಜನರು ತಪ್ಪಾಗಿ ತಿಳಿದಂತೆ

ಲಿಂಗಾಯತ ಧರ್ಮವು ಪೂಜಿಸಲು ಹೇಳುವುದು ಪೌರಾಣಿಕ ತ್ರಿಮೂರ್ತಿಗಳಲ್ಲಿ ಒಬ್ಬನಾದ, ತಮೋ ಗುಣ ಪ್ರಧಾನ ರುದ್ರನನ್ನಲ್ಲ; ಸತ್-ಚಿತ್-ಆನಂದ ನಿತ್ಯ ಪರಿಪೂರ್ಣನಾದ ಮಹಾವಿಭು, ಪರಶಿವನನ್ನು.

### ತ್ರಿಮೂರ್ತಿಗಳ ಕಲ್ಪನೆ

ಶರಣರು ಕೊಡುವ ತ್ರಿಮೂರ್ತಿಗಳ ಕಲ್ಪನೆಯೂ ಬಹು ವಿಶಿಷ್ಟವಾದುದು. ಬ್ರಹ್ಮ, ವಿಷ್ಣು, ರುದ್ರರು ಬೇರೆ ಬೇರೆ ವ್ಯಕ್ತಿಗಳಲ್ಲ; ಆತ್ಯಂತಿಕ ದೈವೀ ಚೈತನ್ಯದ ಮೂರು ಶಕ್ತಿಗಳು, ಕರ್ತವ್ಯ ಮುಖವಾದಾಗ ಕೊಡಬಹುದಾದ ಹೆಸರುಗಳು. ಉದಾಹರಣೆಗಾಗಿ ಒಬ್ಬ ವ್ಯಕ್ತಿಯನ್ನು ತೆಗೆದುಕೊಳ್ಳೋಣ. ಅವನು ಗುರುಗಳ ಸನ್ನಿಧಿಗೆ ಬಂದಾಗ ಶಿಷ್ಯನು, ಕೆಲಸಕ್ಕೆ ಹೋದಾಗ ಸರ್ಕಾರಿ ನೌಕರನು, ಮನೆಗೆ ಹೋದಾಗ ಪತ್ನಿಗೆ ಪತಿ, ತಾಯಿಗೆ ಮಗ, ಮಕ್ಕಳಿಗೆ ತಂದೆ, ಸೋದರರಿಗೆ ಭ್ರಾತೃ ಹೇಗೆ ಬೇರೆ ಬೇರೆ ಕರ್ತವ್ಯಮುಖನಾದಾಗ ಒಬ್ಬನೇ ವ್ಯಕ್ತಿಗೆ ಬೇರೆ ಬೇರೆ ಹೆಸರುಗಳು ಬರುವಂತೆ, ಪರಮಾತ್ಮನು ಸೃಷ್ಟಿಕರ್ತನಾಗುವಾಗ ಬ್ರಹ್ಮ ಎಂಬ ಅಭಿದಾನ ಹೊಂದಿದರೆ, ರಕ್ಷಿಸುವಾಗ ವಿಷ್ಣು ಎಂಬ ಅಭಿದಾನ ತಾಳುವನು, ಸೃಷ್ಟಿಯನ್ನು ಲಯಿಸುವಾಗ ರುದ್ರ ಎನಿಸಿಕೊಳ್ಳುವನು. ಹೀಗೆ ವಿವಿಧ ಕಾರ್ಯಮುಖನಾದ ಪರಮಾತ್ಮನಿಗೆ ಹೆಸರುಗಳು ಭಿನ್ನವಾಗಿ ಬರುವವು. ದೇವನಿಗೆ ಯಾವುದೇ ಒಂದು ವಿಶಿಷ್ಟವಾದ ಹೆಸರಿಲ್ಲದ ಕಾರಣ ಅವನನ್ನು ಬ್ರಹ್ಮ, ವಿಷ್ಣು, ರುದ್ರ, ಶಿವ ಎಂಬ ಯಾವುದೇ ಹೆಸರಿನಿಂದ ಕರೆದರೂ ತಪ್ಪಲ್ಲ. ಆದರೆ ನಾಲ್ಕು ತಲೆಗಳ ವಿಶಿಷ್ಟರೂಪದ ವ್ಯಕ್ತಿಯನ್ನೇ ಬ್ರಹ್ಮನೆಂದು-ಸೃಷ್ಟಿಕರ್ತನೆಂದು; ಗಧಾ, ಶಂಖ ಚಕ್ರಧಾರಿಯಾದ ಕ್ಷೀರಶಯನನನ್ನೇ ವಿಷ್ಣುವೆಂದು-ಸ್ಥಿತಿಪಾಲಕನೆಂದು; ಗಂಗೇ ಗೌರೀವಲ್ಲಭ, ನಾಗಭೂಷಣನನ್ನೇ ರುದ್ರನೆಂದು-ಲಯಕರ್ತನೆಂದು; ಹೇಳುವುದನ್ನು ಶರಣರು ಒಪ್ಪುವುದಿಲ್ಲ. ಇದರಿಂದ ನಾವು ಗ್ರಹಿಸಬಹುದಾದ ಅಂಶವೆಂದರೆ ಶರಣರು ಪೂಜಿಸುವುದು ಆದಿಕಾರಣನಾದ ಜಗದಂತರ್ಯಾಮಿಯಾದ ಪರಶಿವನನ್ನು ಮಾತ್ರ ಎಂಬುದನ್ನು.

### ಸರ್ವೋತ್ತಮನು

ಇಂತಹ ಪರಮಾತ್ಮನ ಸ್ವರೂಪವೇನು ? ತಾವು ಕಂಡುಕೊಂಡ ಸ್ವರೂಪವನ್ನು ಶರಣರು ನೂರಾರು ವಚನಗಳಲ್ಲಿ ಚಿತ್ರಿಸಿದ್ದಾರೆ.

ಎತ್ತೆತ್ತ ನೋಡಿದಡತ್ತತ್ತ ನೀನೇ ದೇವಾ
ಸಕಲ ವಿಸ್ತಾರದ ರೂಪು ನೀನೇ ದೇವಾ
'ವಿಶ್ವತಸ್ ಚಕ್ಷು' ನೀನೇ ದೇವಾ
'ವಿಶ್ವತೋಮುಖ' ನೀನೇ ದೇವಾ
'ವಿಶ್ವತೋಬಾಹು' ನೀನೇ ದೇವಾ
'ವಿಶ್ವತಃಪಾದ' ನೀನೇ ದೇವಾ, ಕೂಡಲ ಸಂಗಮ
ದೇವಾ. (ಬ ಷ. ವ. 532)

ಪರಮಾತ್ಮನು ಸರ್ವವ್ಯಾಪಕನು (Omni present); ಈ ಜಗತ್ತಿನಲ್ಲಿ ಅಣುರೇಣು ತೃಣ ಕೋಟಿಯಲ್ಲೆಲ್ಲ ಹಾಲಿನಲ್ಲಿ ತುಪ್ಪವಿರುವಂತೆ, ಓತಪ್ರೋತವಾಗಿ ಬೆರೆತಿರುವವನು. ಅನಂತ ಕಣ್ಣುಗಳನ್ನುಳ್ಳ ಸರ್ವದ್ರಷ್ಟಾರನೂ (Omniscient), ಜಗತ್ತನ್ನು ಯಂತ್ರದಂತೆ ಆಡಿಸುವ ಯಂತ್ರವಾಹಕನು, ಸರ್ವಶಕ್ತನು (Omnipotent), ಜಗದಲ್ಲೆಲ್ಲ ತನ್ನ ಪಾದಗಳನ್ನು ಹರಡಿಸಿಕೊಂಡವನು ಅರ್ಥಾತ್ ಇರುವವನು.

### ಅಜ – ಅಮರ

ಸಾವು-ಕೇಡು, ಆದಿ-ಅಂತ್ಯಗಳಿಲ್ಲದವನು ಆದ್ದರಿಂದ ಹುಟ್ಟು-ಸಾವು ಇಲ್ಲದ ಅಭವನನ್ನು ಮಾತ್ರವೇ ಪರಮಾತ್ಮನೆಂಬ ಒಪ್ಪುವ ಶರಣರು, ಹುಟ್ಟಿ-ಅಳಿದ ವ್ಯಕ್ತಿಗಳನ್ನು ದೈವೀಕರಿಸಿ ದೇವರು ಎಂದು ಪೂಜಿಸುವ ಧಾರ್ಮಿಕರನ್ನು ವಿಡಂಬಿಸಿ ಮಾತನಾಡುವರು. ಉತ್ಪತ್ತಿ ಸ್ಥಿತಿ ಪ್ರಳಯಕ್ಕೆ ಹೊರಗಾದ ಕೂಡಲ ಸಂಗಮದೇವರಿಗೆ ಮಾತಾಪಿತರುಳ್ಳೆಡೆ ಹೇಳಿರೋ ? (ಬ.ಷ.ವ. 544), ಅಮೂಲ್ಯನೂ, ಅಪ್ರಮಾಣನೂ, ಅಯೋನಿಜನು ಕೂಡಲ ಸಂಗಮದೇವರು (ಬ.ಷ.ವ. 1237), ಎಂದು ಸ್ಪಷ್ಟವಾಗಿ ದೇವರ ಸ್ವರೂಪವನ್ನು ಹೇಳುವರು. ತಂದೆ ತಾಯಿಯುಳ್ಳವರು ದೇವರಲ್ಲ, ತಾನು ಜಗತ್ತಿಗೆಲ್ಲ ಆದಿಕಾರಣನಾಗಿ ತನಗೊಂದು ಕಾರಣವಿಲ್ಲದೆ ಇರುವ (Uncaused but cause of this universe) ಶುದ್ಧ ಚೇತನನು ಮಾತ್ರವೇ ದೇವರು ಎಂಬುದನ್ನು ಪ್ರಭುದೇವರು ಹೀಗೆ ಹೇಳುತ್ತಾರೆ :

ತಾಯಿ ತಂದೆಯಿಲ್ಲದ ಕಂದಾ
ನಿನ್ನಿಂದ ನೀನೆ ಹುಟ್ಟಿ ಬೆಳೆದೆಯಲ್ಲಾ........
ನಿನ್ನ ಚಾರಿತ್ರ ನಿನಗೆ ಸಹಜ ಗುಹೇಶ್ವರ

## ಕೇವಲ ನಿಮಿತ್ತ

ಪರಮಾತ್ಮನು ಆಕಾರವೊಂದಿಲ್ಲದ ನಿರಾಕಾರನು ನಿರ್ಗುಣನು, ನಿತ್ಯ, ನಿರಂಜನನು, ನಿರ್ವಿಕಾರಿಯು, ಜಗತ್ತು ರೂಪು ತಳೆವುದಕ್ಕೆ ಮುನ್ನವೇ ಇದ್ದು, ಜಗದಲ್ಲಿ ಲೀಲೆಯಾಡಿ, ಇದು ಲಯವಾದ ಬಳಿಕವೂ ನಿರ್ವಿಕಾರಿಯಾಗಿ, ಪೂರ್ಣನಾಗಿ ಅವನು ಇರುವನು ಇಂತಹ ಪರಮಾತ್ಮನು ಎಡೆ–ಕಡೆಕಲ್ಲದವನು, ಕುಲ–ಸೀಮೆ ಇಲ್ಲದವನು, ಭಯ–ಭವ ಇಲ್ಲದವನು ಈ ಜಗತ್ತಿಗೆ ಅಭಿನ್ನ ನಿಮಿತ್ತೋಪಾದಾನ ಕಾರಣನಾಗಿರುವನು. ಜೇಡರ ಹುಳುವು ತನ್ನ ಬಾಯೊಳಗಣ ಜೊಲ್ಲುರಸವನ್ನು ಉಪಾದಾನ ಕಾರಣವಾಗಿ ಮಾಡಿ, ಬಲೆಯನ್ನು ನೆಯ್ದು ತಾನು ನಿಮಿತ್ಯ ಕಾರಣವಾಗಿ ಇರುವಂತೆ, ಪರಶಿವನು ತನ್ನಂತರ್ಗತವಾಗಿರುವ ಚಿಚ್ಛಕ್ತಿಯನ್ನು ಈ ಜಗತ್ತಿಗೆ ಉಪಾದಾನವಾಗಿ ಮಾಡಿ ತಾನು ನಿಮಿತ್ತ ಕಾರಣವಾಗುವನು- ಸೃಷ್ಟಿಮಾಡಿ, ತನ್ನ ಸೃಷ್ಟಿಯಿಂದ ದೂರ ನಿಲ್ಲದೆ, ಅದರಲ್ಲಿ ಅಂತರ್ಯಾಮಿಯಾಗಿ ಬೆರೆಯುವನು. ಚೇತನಮಯವಾದ ಜೇಡವು ಜಡವಾದ ಬಲೆ, ಚೈತನ್ಯಮಯ ಮರಿ ಎರಡಕ್ಕೂ ಕಾರಣವಾಗುವಂತೆ, ಪರಮಾತ್ಮನು ಮೂಲತಃ ಚೇತನ ಸ್ವರೂಪನಾಗಿ ಜಡವಾದ, ಚೈತನ್ಯಮಯ ಜೀವಾತ್ಮರುಗಳನ್ನು ಸೃಷ್ಟಿಸುತ್ತಾನೆ.

## ವ್ಯಕ್ತ–ವ್ಯಕ್ತಿಯಲ್ಲ

ಪರಮಾತ್ಮನು ನಿರಾಕಾರ, ನಿರ್ಗುಣ, ಆದಿಕಾರಣ ಎಂಬ ದೇವರ ಸ್ವರೂಪವು ತತ್ವಜ್ಞಾನಿಯ ಬುದ್ಧಿಗೆ ಸಂತೃಪ್ತಿ ನೀಡುವುದೇ ಹೊರತು, ಭಕ್ತನ ಹೃದಯಕ್ಕಲ್ಲ. ಅವ್ಯಕ್ತ ದೇವರ ಕಲ್ಪನೆ ವೈಚಾರಿಕ ಪ್ರಜ್ಞೆಯನ್ನು ತಣಿಸಬಲ್ಲದೇ ವಿನಾ ಭಾವುಕ ಹೃದಯವನ್ನಲ್ಲ. ಇದನ್ನು ಕಂಡ ಶರಣರು ದೇವನನ್ನು ವ್ಯಕ್ತನನ್ನಾಗಿ ( personal ), ಸುಗುಣನನ್ನಾಗಿ ಕಾಣ ಬಯಸಿದರು. [ ದೇವನನ್ನು ವ್ಯಕ್ತನನಾಗಿ ಕಂಡರೇ ವಿನಾ ವ್ಯಕ್ತಿ ( person ) ಯನ್ನಾಗಿ ಅಲ್ಲ, ]

ತಂದೆ ನೀನು ತಾಯಿ ನೀನು
ಬಂಧು ನೀನು ಬಳಗ ನೀನು

ದೇವರು ಸೃಷ್ಟಿಕರ್ತನಾಗಿ, ತಂದೆಯಾಗಿ ಜಗತ್ತಿಗೆ ನಿಮಿತ್ತ ಕಾರಣನಾಗಿರುವನು; ಸೃಷ್ಟಿಪಾಲಕನಾಗಿ, ತಾಯಿಯಾಗಿ ಉಪಾದಾನ ಕಾರಣನೂ ಆಗಿರುವನು. ಇಷ್ಟು ಮಾತ್ರವಲ್ಲದೆ ನಂಬಿದ ಹೃದಯವು ಕರೆದಾಗ ಓಗೊಡುವ ಬಂಧುವೂ, ಸನ್ಮಾರ್ಗದರ್ಶಿಯೂ ಆಗಿದ್ದಾನೆ. ಈ ವ್ಯಕ್ತ ದೇವರು ಪತಿಯಾಗಿ, ಸ್ನೇಹಿತನಾಗಿ ಮಧುರ ಭಕ್ತಿಯನ್ನು ಸ್ವೀಕರಿಸುವನು, ಎಂಬ ಕಲ್ಪನೆ ಶರಣ ಧರ್ಮದಲ್ಲಿ ಅನುಭಾವ ಸಾಹಿತ್ಯವು ಹುಲುಸಾಗಿ ಬೆಳೆಯುವಂತೆ ಮಾಡಿದೆ. ಆಡಿ ಬರುವ ಮಗುವಿಗೆ ಆದರದಿಂದ ಊಟಕ್ಕಿಕ್ಕುವ ತಾಯಿಯಷ್ಟು ಮಮತಾಮಯಿ ಅವನು. ಹಾವನ್ನು-ಕಿಚ್ಚನ್ನು ಮುಟ್ಟೀತಲ್ಲಾ ಎಂದು ತಾಯಿ ವಿನಂಚಿತಳಾಗಿ ಮಗುವಿನ ಬೆನ್ನ ಹಿಂದೆ ಇರುವಂತೆ, ಪರಮಾತ್ಮನು ನಂಬಿದವರ ಶ್ರೀರಕ್ಷೆಯಾಗಿರುವನು.

## ಮುದ್ದಿಸುವನ ತಿದ್ದುವನ :

ಶರಣ ಧರ್ಮದ ದೇವರು, ಎಡದ ಕೈಯಲ್ಲಿ ಹಾಲಿನ ಬಟ್ಟಲು, ಬಲದ ಕೈಯಲ್ಲಿ ಶಿಕ್ಷಿಸುವ ದಂಡ ಹಿಡಿದ ತಾಯಿಯಂತೆ, ಒಂದೆಡೆ ಕಾರುಣ್ಯಧಾರೆಯಿಂದ ಬದುಕಿನ ಸಸಿಯನ್ನು ಪಲ್ಲವಿಸಿ ಬೆಳೆಸಿದರೆ, ಇನ್ನೊಂದೆಡೆ ಶಿಕ್ಷಾದಂಡ ಇಡಿದು ಲೋಪದೋಷಗಳನ್ನು ತಿದ್ದಿ, ನ್ಯಾಯಾಧೀಶನಂತೆ ವರ್ತಿಸುವವನು. ಲೀಲಾಮಯವಾದ ಪ್ರಪಂಚದಲ್ಲಿ ಜೀವಾತ್ಮರುಗಳನ್ನು ಆಡ ಬಿಟ್ಟು ಇರುವವನು ಮಾತ್ರವಲ್ಲ, ಅವರು ದಾರಿ ತಪ್ಪಿದಾಗ ಗುರುವಾಗಿ ಬಂದು ಜಾಗ್ರತಿಸಿ, ಲಿಂಗವಾಗಿ ಪೂಜೆಗೊಂಡು, ಜಂಗಮವಾಗಿ ಮಾರ್ಗದರ್ಶನ ಮಾಡುವವನು ಹೀಗೆ ಸುಗುಣ–ನಿರ್ಗುಣ, ಸಾಕಾರ, ವ್ಯಕ್ತಾವ್ಯಕ್ತನಾದ ಅಂತರ್ಯಾಮಿ, ಅತೀತನಾದ, ಪರಿಪೂರ್ಣ ದೇವರ ಕಲ್ಪನೆಯನ್ನು ಶರಣರು ನೀಡಿದರು.

ಈ ಕಲ್ಪನೆಯ ಅಡಿಪಾಯದ ಮೇಲೆಯೇ ಶರಣರ ಉಳಿದೆಲ್ಲ ಸಾಧನೆ, ಸಮಾಜ ಶಾಸ್ತ್ರಗಳು ರೂಪಗೊಂಡವು. ದೇವನು ಈ ಜಗತ್ತಿನಲ್ಲಿ ಅಂತರ್ಯಾಮಿಯಾದ ಕಾರಣ ಸೃಷ್ಟಿಯು ಶಿವನ ಲೀಲಾರಂಗವಾಯಿತು ಕರ್ತಾರನ ಕಮ್ಮಟವಾಯಿತು, ಸತ್ಯವಾಯಿತು, ಜೀವರುಗಳನ್ನು ಪರಿಪಕ್ವಗೊಳಿಸುವ ಮಹಾ ಮನೆಯಾಯಿತು. ಪ್ರತಿಯೊಂದು ಜೀವಿಯಲ್ಲಿ ಶಿವನ ಅಂಶ ಹಾಸು ಹೊಕ್ಕಾಗಿರುವುದರಿಂದ, ಎಲ್ಲರೂ ಸಮಾನರು, ದೇವರ ಮಕ್ಕಳು ಎಂಬ ಸಮತಾವಾದ, ಜಾತ್ಯಾತೀತ ದೃಷ್ಟಿ

(26ನೇ ಪುಟ ನೋಡಿ)

# ಜೀವನ ಕಲೆ

— ಸದಾಶಿವ ಒಡೆಯರ್

“ತನ್ನ ತಾನರಿದವನಿಗೆ ತನ್ನರಿವೇ ಗುರು” ಈ ಜಾಣ್ನುಡಿ ನಿರಂತನ ಸತ್ಯ. ಈ ಅರಿವನ್ನುಂಟುಮಾಡಿಕೊಳ್ಳುವ ಯತ್ನದಿಂದಲೇ ಮನುಷ್ಯ ತನ್ನ ಬಾಳಿಗೆ ಅರ್ಥವನ್ನು ಸಾರ್ಥಕತೆಯನ್ನು ತಂದುಕೊಳ್ಳಬಲ್ಲ. ತನ್ನ ಮನಸ್ಸನ್ನು ಹದಗೊಳಿಸಿ ಪರಿಪಾಕಗೊಂಡಾಗ ಮನುಷ್ಯ ಜೀವನ ಕಲೆಯನ್ನು ಅರಿತುಕೊಳ್ಳಬಲ್ಲ. ಜೀವನಕಲೆ ಎಲ್ಲ ಕಲೆಗಳಿಗಿಂತಲೂ ಮಹೋನ್ನತವಾದ ಕಲೆ. ಜೀವನದಲ್ಲೀ ಇನ್ನೂ ಅನೇಕ ಉಪಯುಕ್ತವಾದ ಅಲಂಕಾರಿಕವಾದ ಮನೋರಂಜಕವಾದ ಕಲೆಗಳಿವೆ. ಆಯಾ ಕಲೆಗಳಿಗೂ ಅವುಗಳ ಪ್ರಯೋಜನ,ಮಹತ್ವ ಇದ್ದೇ ಇದೆ. ಆದರೆ ಹೆನ್ರಿ ಥೋರೋ ಒಂದೆಡೆ ಹೇಳಿದಂತೆ “ಒಂದು ಸುಂದರವಾದ ಚಿತ್ರವನ್ನು ಬಣ್ಣದಲ್ಲಿ ಬರೆದಾಗಲೀ, ಒಂದು ಚೆಲುವಿನ ಮೂರ್ತಿಯನ್ನು ಕಲ್ಲಿನಲ್ಲಿ ಕೊರೆದಾಗಲೀ ಸೌಂದರ್ಯವನ್ನು ರೂಪಿಸುವದು ಒಂದು ಕಲೆ. ಆದರೆ ನಾವು ಜೀವಿಸುವ ಸೃಷ್ಟಿಯಲ್ಲಿ ನಮ್ಮ ಇರುವಿಕೆಯಿಂದ ಸುತ್ತಲಿನ ವಾತಾವರಣವನ್ನೇ ಸುಖಮಯವಾಗಿ ಮಾಡುವುದು ಇವೆಲ್ಲಕ್ಕೂ ಮಿಗಿಲಾದ ಕಲೆ.” ಹೆನ್ರಿ ಥೋರೋ ಈ ಮಾತಿನಲ್ಲಿ, ಜೀವನವೂ ಒಂದು ಉನ್ನತವಾದ ಕಲೆಯೆಂದು ಪ್ರತಿಪಾದಿಸಿದ್ದಾರೆ. ಈ ಮಾತಿನ ಮರ್ಮವು ಮಹಾತ್ಮ ಗಾಂಧಿ, ಗೌತಮಬುದ್ಧ, ಬಸವೇಶ್ವರ, ಫ್ಲಾರೆನ್ಸ್ ನೈಟಿಂಗೇಲ್, ಡಾ. ಸ್ವಾಯಿಟ್ಝರರಂಥ ವ್ಯಕ್ತಿಗಳ ಜೀವನವನ್ನು ನೆನೆದಾಗ ಅರ್ಥವಾಗುತ್ತದೆ. ತಮ್ಮ ಉದಾತ್ತ ಜೀವನದಿಂದ ತಮ್ಮ ಸುತ್ತಲಿನ ವಾತಾವರಣವನ್ನೇ ಮಾರ್ಪಡಿಸಿದ ಕಲಾವಿದರಿವರು. ಜಗತ್ತಿನಲ್ಲಿ ಹಿಂದೆಯೂ, ಇಂದಿಗೂ, ಮುಂದೆಯೂ ಇಂಥ ಕುಶಲ ಕಲಾವಿದರು ಅಸಂಖ್ಯಾತ. ತಮ್ಮ

> ಸ್ವಾರ್ಥಪೂರ್ಣ ಸುಖಮಯ ಬಾಳ್ವೆ ಅರ್ಥಹೀನ ನೆರೆಹೊರೆ ಹಾಗೂ ತನ್ನ ಪರಿಸರವನ್ನು ಸುಖಮಯವಾಗಿಸಬಲ್ಲ ಉದಾತ್ತ ಗುಣಗಳನ್ನು ರೂಢಿಸಿಕೊಂಡು ಬಾಳುವುದೇ ಒಂದು ಉತ್ತಮ ಕಲೆ.

ಸುತ್ತಲಿನ ಹಲವಾರು ಜನರನ್ನು ಸುಖಿಗಳನ್ನಾಗಿ ಮಾಡಿ ದ ಪುಣ್ಯ ಅವರದು. ಇಂತಹ ಪುಣ್ಯ ಜೀವಿಗಳು ತಮ್ಮ ಬದುಕಿನ ಔದಾರ್ಯದಿಂದ ತಮ್ಮ ಸುತ್ತಲಿನ ಸೃಷ್ಟಿಯನ್ನೇ ಸುಖಿಯಾಗಿ ಮಾರ್ಪಡಿಸುವರು. ಸುಖ ಜೀವನ ನಡೆಸಬಯಸುವ ಪ್ರತಿಯೊಬ್ಬನೂ ಈ ಕಲೆಯನ್ನು ಅರಿಯಲೇ ಬೇಕು. ಅದನ್ನು ಶಾಲೆ, ಕಾಲೇಜುಗಳಲ್ಲಿ ಉಳಿದ ಸಾಮಾಜಿಕ ಸಾಂಸ್ಕೃತಿಕ ಸಂಘ– ಸಂಸ್ಥೆಗಳ ಒಡನಾಟದಲ್ಲಿ ಕಲಿಯಬಹುದು. ಒಳ್ಳೇ ಜನರ ಮಧುರ ಸಹವಾಸದ ಸಂಪರ್ಕದಿಂದ ಈ ಕಲೆಯನ್ನು ಕಲಿಯಬಹುದು. ಜೀವನದಲ್ಲಿ ನಾವು ಪ್ರತಿಯೊಬ್ಬರೂ ಮೂಕ ತಾಳ್ಮೆಯಿಂದ ಸಹಿಸಿದ ಕಷ್ಟಗಳ ಅನುಭವದಿಂದ ಈ ಕಲೆಯನ್ನು ಅಳವಡಿಸಿಕೊಳ್ಳಬಹುದು. ಆನಂದದ ಉನ್ಮಾದ, ದುಃಖದ ವೇದನೆ, ಜಯದ ಹರ್ಷ, ಸೋಲಿನ ಖಿನ್ನತೆ, ಪ್ರೇಮ, ದ್ವೇಷ ಜನತೆಯ ಸಹಕಾರ, ನಿಷೇಧ ಇವೆಲ್ಲವುಗಳ ಅನುಭವದಿಂದ ಜೀವಿಸುವ ಕಲೆಯನ್ನು ಮನುಷ್ಯ ಅರಿತುಕೊಳ್ಳಬೇಕಾಗುತ್ತದೆ.

## ಉದಾತ್ತ ಮೌಲ್ಯಗಳು

ಮನುಷ್ಯ ಜೀವನವು ಸುಖಮಯವಾಗಬೇಕಾ ದರೆ, ಹಲವು ಉದಾತ್ತ ಮೌಲ್ಯಗಳು, ಆ ಮೌಲ್ಯಗಳನ್ನು ಆಚರಣೆಯಲ್ಲಿ ತರಲು ಆಸಕ್ತಿ, ಇವು ಬೇಕೇ ಬೇಕು.

ಇವುಗಳಿಲ್ಲದೇ ಮನುಷ್ಯ ಜೀವನಕ್ಕೆ ಒಂದು ಅರ್ಥ, ಸಾರ್ಥಕತೆಯ ಭಾವನೆ, ಮನಸ್ಸಿನ ನೆಮ್ಮದಿ, ಸಮಾಧಾನ–ಶಾಂತಿ ದೊರಕಲಾರವು.

ಈ ಮೌಲ್ಯಗಳೆಂದರೆ, ಪರೋಪಕಾರ, ದಯೆ, ಅನುಕಂಪ, ಕರುಣೆ, ತ್ಯಾಗ, ಪ್ರೇಮ, ಸತ್ಯ, ಶುದ್ಧ ನಡೆ–ನುಡಿ–ಇವುಗಳು ಮುಖ್ಯವಾದುವು. ಈ ಸದ್ಗುಣಗಳು ನಾವು ಜೀವಿಸುವ ಭೂಮಿಯನ್ನೇ ಸ್ವರ್ಗವನ್ನಾಗಿ ಮಾರ್ಪಡಿಸಬಲ್ಲವು. ಈ ಸದ್ಗುಣಗಳಿಂದ ಪ್ರೇರಿತರಾಗಿ ಜಗತ್ತಿನ ಕಲ್ಯಾಣಕ್ಕಾಗಿ ಶ್ರಮಿಸುವ ಮನುಷ್ಯನಿಗೆ ಮನಸ್ಸಿನ ನೆಮ್ಮದಿ, ಸುಖ, ಕೃತಾರ್ಥತೆ, ಶಾಂತಿ–ಸಮಾಧಾನವುಂಟಾಗುತ್ತದೆ. ಉಪಕಾರದ ಪ್ರಯೋಜನ ಹೊಂದಿದವನಿಗೆ ಜೀವನವು ಹೆಚ್ಚು ಸುಖಮಯವಾಗುತ್ತದೆ. ಹೀಗೆ ಮಾಡಿದವನೂ, ಪ್ರಯೋಜನ ಹೊಂದಿದವನೂ–ಈರ್ವರಿಗೂ ಜೀವನವು ಹೆಚ್ಚು ಸುಖಮಯವಾಗುತ್ತದೆ. ಸದ್ಗುಣ ಪ್ರೇಮ, ನೀತಿಯ ಬಗ್ಗೆ ಗೌರವ ಇವು ಮನುಷ್ಯನ ಅಂತರಾಳದಲ್ಲಿ ಮೂಲತಃ ಇದ್ದೇ ಇರುತ್ತವೆ. ಪರೋಪಕಾರ ಮಾನವನ ಅತ್ಯಂತ ಉದಾತ್ತವಾದ ಸದ್ಗುಣ. ಜಗಜ್ಯೋತಿ ಬಸವಣ್ಣನವರು ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ಈ ಗುಣವೇ ಶರಣರ ಲಕ್ಷಣವೆಂದು ಸಾರಿದರು. ತನ್ನ ಬದುಕಿನಿಂದ ತನ್ನ ಸಹಜೀವಿಗಳನ್ನು ಯಾವುದೇ ರೀತಿಯಿಂದ ಹೆಚ್ಚು ಸುಖಿಗಳನ್ನಾಗಿ ಮಾಡಲು ಹೆಣಗುವುದೇ ಬದುಕಿನ ಕೃತಾರ್ಥತೆಯೆಂದು ಹೇಳಬಹುದು. ಇಂಥ ಮಾನವನು ತನ್ನ ಉದಾತ್ತ ಜೀವನದಿಂದ ತನ್ನ ಸುತ್ತಲಿನ ಜೀವನವನ್ನೇ ಮಾರ್ಪಡಿಸುತ್ತಾನೆ. ಜಗತ್ತಿನ ಇತಿಹಾಸದಲ್ಲಿ ಇಂಥ ಪುಣ್ಯ ಜೀವಿಗಳ ಉದಾಹರಣೆಗಳಿಗೆ ಕೊರತೆಯಿಲ್ಲ. ಕ್ರೈಸ್ತನಾದಿಯಾಗಿ ಬಸವಣ್ಣ, ಮಹಾತ್ಮಾಗಾಂಧೀಜಿಯವರ ವರೆಗೆ ಈ ಪರಂಪರೆ ನಡೆದು ಬಂದಿದೆ. ಇಂಥ ಮಹಾತ್ಮರ ಚರಿತ್ರೆಗಳು ಮನುಷ್ಯನ ಸದ್ಗುಣಗಳ ಘನತೆಯ ಅರಿವನ್ನುಂಟು ಮಾಡುತ್ತವೆ. ಶಿಲುಬೆಯ ಮೇಲಿನ ಕ್ರೈಸ್ತ, ದೀಪ ಹಿಡಿದು ರೋಗಿಯ ಮಗ್ಗುಲಿಗೆ ನಿಂತ ಫ್ಲಾರೆನ್ಸ್ ನೈಟಿಂಗೇಲ್, ಬಡವರ ಗುಡಿಸಲಿನ ಮಧ್ಯೆ ಅರೆಬತ್ತಲೆ ನಡೆದಿರುವ ಮಹಾತ್ಮಾಗಾಂಧಿ-ಇವರ ಚಿತ್ರಗಳು ಕಣ್ಣ ಮುಂದೆ ಬಂದಾಗ, ಮನುಷ್ಯನಲ್ಲಿ ಗೌರವ ಉಕ್ಕಿ ಬಾರದಿದ್ದರೆ ಅವನ ಮಾನವತೆಗೆ ಕುಂದು·

## ನೈಜ ಸುಖ ಯಾವುದು?

ಪರೋಪಕಾರ ದಾನದ ಪ್ರವೃತ್ತಿಯಲ್ಲಿ ಮಾರ್ಪಡುತ್ತದೆ. ಈ ಪ್ರವೃತ್ತಿಯಿಲ್ಲದ ಮನುಷ್ಯ ಗಳಿಕೆಯ ದುಷ್ಟ ಪ್ರವೃತ್ತಿಗೆ ಈಡಾಗುತ್ತಾನೆ. ನಿಜವಾದ ಸುಖಕ್ಕೆ ಮೂಲವೆಂದರೆ ಪರರ ಬಗ್ಗೆ ಕಳಕಳಿ, ಅವರ ಕಲ್ಯಾಣದ ಬಗ್ಗೆ ಆಸಕ್ತಿ ಹಾಗೂ ಜೀವನದ ಸುಖ–ಸಾಧನಗಳನ್ನು ಅವರೊಡನೆ ಹಂಚಿಕೊಳ್ಳುವ ಮನೋವೃತ್ತಿ. ಇದಕ್ಕೆ ವ್ಯತಿರಿಕ್ತವಾದ ಪ್ರವೃತ್ತಿಯೆಂದರೆ ಜಗತ್ತಿನಲ್ಲಿ ಸಿಗುವ ಎಲ್ಲ ಭೂಮಿ, ಧನ. ವಸ್ತ್ರ–ಒಡವೆ, ಮನೆ–ಮಠ, ವಾಹನ–ಇವೆಲ್ಲವುಗಳು, ಅಧಿಕಾರ ವರ್ಚಸ್ಸು, ವಿಶೇಷ ಸೌಕರ್ಯಗಳು, ಇವುಗಳನ್ನು ಸಂಗ್ರಹಿಸುವುದು, ಸಂಪಾದಿಸಿ ಅದರಲ್ಲಿ ತೃಪ್ತಿ ಪಡೆಯುವದು. ಇದು ಸ್ವಾರ್ಥಪರ ಗಳಿಕೆಯ ಸುಖ. ಇವುಗಳಿಗೆ ಜೀವನದಲ್ಲಿ ಕೆಲ ಮಟ್ಟಿನ ಉಪಯುಕ್ತತೆ ಇದೆ ಎಂಬುದನ್ನು ಅಲ್ಲಗಳೆಯುವದು ಮೂರ್ಖತನವಾದೀತು. ಆದರೆ ಅವುಗಳೇ ಸುಖದ ಸಾಧನ ಎಂದು ತಿಳಿಯುವದು ಅದಕ್ಕೂ ಹೆಚ್ಚಿನ ಮೂರ್ಖತನ. ಅವು ನಮ್ಮ ಆತ್ಮದ ಉನ್ನತಿಗೆ ಎಷ್ಟೂ ಸಹಾಯವಾಗಲಾರವು. ನಮ್ಮ ವ್ಯಕ್ತಿತ್ವಕ್ಕೆ ಮಾನವೀಯತೆಯನ್ನು ನೀಡಲಾರವು. ನಮ್ಮ ದೃಷ್ಟಿಗೆ ಆಳವಾದ ವಿಚಾರಶಕ್ತಿಯನ್ನು ನೀಡಲಾರವು. ನಮ್ಮ ಔದಾರ್ಯವನ್ನು ಹೆಚ್ಚಿಸಲಾರವು. ಅಥವಾ ನಮ್ಮ ಬದುಕನ್ನು ಒಂದು ಉದಾತ್ತ ಆದರ್ಶಕ್ಕೆ ಅಣಿಗೊಳಿಸಲಾರವು. ಸ್ವಲ್ಪ ಆಳವಾಗಿ ವಿಚಾರಿಸಿದರೆ ಅವು ಬಹಳ ಜನರಿಗೆ ಅನೇಕ ಸಲ ಅಸಮಾಧಾನ, ಅತೃಪ್ತಿ, ನಿರಾಶೆಗೆ ಕಾರಣವಾಗುವದೇ ಹೆಚ್ಚು. ಆದರೆ ನೀವು ಸುದೈವದಿಂದ ಶೇಖರಿಸುವ ಆಸಕ್ತಿಯುಳ್ಳ ವ್ಯಕ್ತಿಯಾಗಿರದೆ ಕೊಡುವುದರಲ್ಲಿ ಸಂತೋಷ ಪಡುವ ವ್ಯಕ್ತಿಯಾಗಿದ್ದರೆ ನಿಮಗೆ ಸಿಕ್ಕಿದ್ದನ್ನು ಇಟ್ಟುಕೊಳ್ಳುವುದನ್ನು ಬಿಟ್ಟು ನಿಮಗೆ ದೊರೆತುದನ್ನೇ ಎಲ್ಲರಿಗೂ ಹಂಚಿಕೊಡುವ ಮನೋವೃತ್ತಿಯವರಾಗಿದ್ದರೆ–ಅದು ಹಣ ಆಸ್ತಿ ಇವನ್ನಷ್ಟೇ ಅಲ್ಲ, ನಿಮ್ಮ ಪ್ರೇಮ, ಸುಖ, ದಯೆ ಕಾರುಣ್ಯ, ಸಹಾನುಭೂತಿ, ನಿಮಗೆ ದೇವದತ್ತವಾದ ಕಲೆಗಳು, ಇವುಗಳನ್ನು ಕೊಟ್ಟು ಅನೇಕರನ್ನು ಸಂತೋಷಗೊಳಿಸುವ ಪ್ರವೃತ್ತಿಯುಳ್ಳವರಾಗಿದ್ದರೆ, ನೀವು ನಿಜವಾಗಿಯೂ ಭಾಗ್ಯಶಾಲಿಗಳು. ಇಂಥ ವ್ಯಕ್ತಿಗಳೇ ಭೂಮಿಯನ್ನು ಜೀವಿಸಲು ಸುಖದ ತಾಣವಾಗಿ ಮಾರ್ಪ

ಡಿಸುವನು. ನಾನು ಜೀವನದಲ್ಲಿ ಭೆಟ್ಟಿಯಾದ ಅತ್ಯಂತ ಸುಂದರ ಸುಖಿಗಳಾದ, ಪ್ರೇಮಮಯ ವ್ಯಕ್ತಿಗಳು. ದೇವದತ್ತವಾದ ಕೊಡುವ ಈ ಗುಣವನ್ನು ಹೊಂದಿದವರು. ಕೊಡುವಾಗ ಮನಸ್ಸಿನಿಂದ ಔದಾರ್ಯದಿಂದ ಉತ್ಸಾಹದಿಂದ ಕೊಡುವರು ತಮ್ಮ ವ್ಯಕ್ತಿತ್ವದ ಅತ್ಯಂತ ಸ್ವಾಭಾವಿಕತೆಯಿಂದ ಕೊಡುವ, ಸ್ವಭಾವ ಉಳ್ಳವರೇ ಅತ್ಯಂತ ಸುಖಿಗಳೂ, ಪ್ರಿಯ ವ್ಯಕ್ತಿ ಆಗಿದ್ದಾರೆ, ಹಾಗೆಯೇ ದುಃಖಿಗಳು ಹಾಗೂ ಅಪ್ರಿಯ ವ್ಯಕ್ತಿಗಳೆಂದರೆ ತಮ್ಮ ಬಗ್ಗೆಯೇ ಸದಾ ಚಿಂತಿಸುವ ಸದಾ ನಶ್ವರವಾದ ಭೌತಿಕಸಾಧನಗಳನ್ನು ಸಂಚಯಿಸುವುದರಲ್ಲಿಯೇ ಸದಾ ನಿರತರಾಗಿರುವ ವ್ಯಕ್ತಿಗಳೇ ಆಗಿದ್ದಾರೆ.ಜೀವನಕ್ಕೆ ಒಂದು ಸೌರಭ ಬರುವದು ನಾವು ಸುಖವನ್ನು ಹುಟ್ಟಿಸುವ ಕ್ರಿಯೆಯಲ್ಲಿ ತೊಡಗವುದರಿಂದ ಅಲ್ಲ ಎಂಬುದನ್ನು ನಾನು ಅನುಭವದಿಂದ ಕಂಡ ಸತ್ಯ.

## ಪ್ರೇಮದ ಮಹತ್ವ

ಮನುಷ್ಯನ ಜೀವನಕ್ಕೆ ಸುಖವನ್ನು ಕೊಡಬಲ್ಲ ಸರ್ವೋತ್ಕೃಷ್ಟ ಗುಣವೆಂದರೆ ಪ್ರೇಮ ; ಅಸಂಖ್ಯಾತ ಸಾಮಾನ್ಯ ಜನರ ನಿತ್ಯ ಜೀವನವನ್ನು ಸುಖಮಯವನ್ನಾಗಿ ಮಾಡಿದ ಶಕ್ತಿ ಅದು. ಮಗುವಿನ ಮೇಲಿನ ತಾಯಿಯ ಪ್ರೇಮ. ತಂಗಿಯ ಮೇಲಿನ, ಅಣ್ಣನ ಪ್ರೇಮ, ಪತಿಯ ಮೇಲಿನ ಪತ್ನಿಯ ಪ್ರೇಮ ಸ್ನೇಹಿತರ ಮಧ್ಯೆ ಕಂಡು ಬರುವ ಪ್ರೇಮ, ಪ್ರೇಯಸಿಯ ಮೇಲಿನ ಪ್ರಿಯತಮನ ಪ್ರೇಮ--ಹೀಗೆ ಮಾನವ—ಮಾನವನ ಮಧ್ಯೆ ಕಂಡು ಬಂದು ಅಸಂಖ್ಯಾತ ಸಂಬಂಧಗಳಲ್ಲಿ ಕಂಡು ಬರುವ ಪ್ರೇಮ --ಇದು ಮಾನವನ ಸಹಜವಾದ ಮೂಲ ಸ್ವಭಾವ. ಅದು ಮೇಲು ಕೀಳೆಂಬ ಸಾಮಾಜಿಕ ವೈಷಮ್ಯಗಳನ್ನು ಒಡೆದು ಹಾಕುತ್ತದೆ. ಭಿನ್ನತೆಯ ಗೋಡೆಗಳನ್ನು ಕೆಡವಿ ಅದು ನಮ್ಮನ್ನು ನಮ್ಮ ವ್ಯಕ್ತಿತ್ವದ ಸಣ್ಣತನದಿಂದ ಮೇಲೆತ್ತಿ ಇಡೀ ವಿಶ್ವವೇ ನನ್ನದು ಎಂಬ ಭಾವನೆಯನ್ನು ಹುಟ್ಟಿಸಿ ಮನುಷ್ಯ ಮನುಷ್ಯರನ್ನು ಎದೆಗಪ್ಪಿಕೊಳ್ಳುವಂತೆ ಮಾಡುತ್ತದೆ. ಕಾಲವನ್ನೂ ಸ್ಥಳದ ಅಂತರವನ್ನೂ ಮೀರಿಸುವ ಶಕ್ತಿ ಅದಕ್ಕಿದೆ. ಅಸಾಧ್ಯವಾದದನ್ನು ಸಾಧ್ಯವಾಗಿಸುವ ಶಕ್ತಿ ಅದಕ್ಕಿದೆ. ಪ್ರೇಮವಿಲ್ಲದೆ ಹೋದಲ್ಲಿ ಕೇವಲ ಸಮೀಪದ ಬಂಧುಗಳು ಕೂಡು ಸಂಬಂಧವಿಲ್ಲದವರಾಗಿ ಬಿಡುತ್ತಾರೆ.

ನಮ್ಮ ಹೃದಯ ಪ್ರೇಮವೆಂಬ ಮಧುರ ಭಾವಕ್ಕೆ ದುಡಿಯದಿದ್ದರೆ. ಈ ಭಾವನೆಗಳಿಂದ ಮತ್ತೊಂದು ಜೀವನದ ಬಗ್ಗೆ ತಾದಾತ್ಮ್ಯ ಹೊಂದಿರದಿದ್ದರೆ, ಇನ್ನೊಂದು ಜೀವದ ಸುಖ ದುಃಖದ ಮಿಡಿತಕ್ಕೆ ನಮ್ಮ ಹೃದಯ ಮಿಡಿಯದಿದ್ದರೆ, ದೇವರು ನಮಗೆ ಬೇರೆ ಇನ್ನೇನನ್ನು ಕೊಟ್ಟರೂ, ಅಂಥ ಮನುಷ್ಯ ಅಹಂಕಾರವೆಂಬ ಬಂದೀಖಾನೆಯಲ್ಲಿ ಬಂಧಿತನಾದ ಅಸಹಾಯಕ ಸ್ಥಿತಿಯಲ್ಲಿದ್ದ ದೀನ ಮಾನವ ಮಾತ್ರ. ಪ್ರೀತಿ ಮಾನವ ತನ್ನ ಸಣ್ಣ ನಡುಗಡ್ಡೆಯಲ್ಲಿ ವಾಸಿಸುವ ಒಂಟಿಗನಿದ್ದಂತೆ. ಅವನ ಸುತ್ತಲಿರುವ ಮಾನವರು ಹಾಗೆಯೇ. ಈ ನಡುಗಡ್ಡೆಗಳಿಂದ ಅವರು ತಮ್ಮನ್ನು ವಿಂಗಡಿಸುವ ನೀರಿನ ಅಂತರವನ್ನು ದಾಟಿ ಒಬ್ಬರನ್ನೊಬ್ಬರು ಅರ್ಥಮಾಡಿಕೊಳ್ಳಲು ಯತ್ನಿಸುತ್ತಾರೆ. ಈ ಸಾಧನಗಳು ಅತ್ಯಂತ ಅಸಮರ್ಪಕ ಹಾಗೂ ಸಾಕಷ್ಟು ಅಭಿವರ್ಧಿಸದ ಸಾಧನಗಳು. ಆದರೆ ಪ್ರೇಮ ಈ ಅಡೆತಡೆಗಳನ್ನು ದಾಟಿಸಿ ಇಡೀ ವಿಶ್ವದ ಮಾನವರನ್ನೇ ಒಂದುಗೂಡಿಸುವ ಸಾಧನ. ಅದುಹೆದರಿಕೆಯನ್ನು ಹೋಗಲಾಡಿಸುತ್ತದೆ. ಅಶೆ, ಧೈರ್ಯವನ್ನು ಹುಟ್ಟಿಸುತ್ತದೆ, ಕರುಣೆಯನ್ನೂ, ಅನುಕಂಪವನ್ನೂ ಅಂಕುರಿಸುತ್ತದೆ. ನಮ್ಮಲ್ಲಿರುವ ಸ್ವಾರ್ಥ ಹಾಗೂ ಹೊಟ್ಟೆಕಿಚ್ಚಿನ ಭಾವನೆಗಳನ್ನು ತೊಡೆದು ಹಾಕುತ್ತದೆ ವೈಯಕ್ತಿಕವಾಗಿ ನಮಗಾಗಲೀ ಅಥವಾ ಅಸೂಯೆಯಿಂದ ತುಂಬಿರುವ ಹುಚ್ಚು ಜಗತ್ತಿಗಾಗಲೀ ಪ್ರೇಮ ಒಂದು ವಿಶ್ವವ್ಯಾಪಿಯಾದ ಸ್ಫೂರ್ತಿಯ ನೆಲೆಯ ನೆಲೆಯಾಗಿದ್ದು ಅದನ್ನು ನಾವು ನಮ್ಮ ಜೀವನದಲ್ಲಿ ಅಳವಡಿಸಿಕೊಳ್ಳದಿದ್ದರೆ ಮೋಕ್ಷವಿಲ್ಲ. ಅದು ಐಹಿಕ – ದೈಹಿಕ ಭೋಗ ಅಥವಾ ಭಾವುಕತೆಯ ವ್ಯಾಮೋಹದ ದೃಷ್ಟಿಯ ಪ್ರೇಮವಲ್ಲ. ಅದು ಕ್ರಿಶ್ಚಿಯನ್ನರ ಸ್ತೋತ್ರಗಳಲ್ಲಿ ಬರುವ ಉದಾತ್ತವಾದ ಪ್ರೇಮ. ಅಲ್ಲಿ ಬರುವ ಅದರ ವ್ಯಾಖ್ಯೆ ಕೇಳಿ

## ಪ್ರೇಮದ ಸ್ವರೂಪ

"ಪ್ರೇಮ ಅತ್ಯಂತ ಸಹನ ಶಕ್ತಿಯುಳ್ಳದ್ದು, ಅದು ದಯಾಮಯ, ಅಸೂಯೆ ಎಂಬುದನ್ನು ಅದು ಅರಿಯದು. ಅದುಪ್ರದರ್ಶನ ಮಾಡಲು ಬಯಸುವದಿಲ್ಲ. ಅದು ಡಂಭಾಚಾರವನ್ನರಿಯದು, ಅದು ಗರ್ವದಿಂದ ಕೂಡಿರುವುದಿಲ್ಲ. ಅದು ಸ್ವಾರ್ಥದಿಂದ ಕಲುಷಿತವಾಗಿರುವುದಿಲ್ಲ. ಅದು ಸಿಟ್ಟಿಗೇಳುವುದಿಲ್ಲ. ತಿರಸ್ಕಾರವನ್ನಂತೂ

ಅರಿಯದು. ಪರರು ತಪ್ಪು ಮಾಡಿದಾಗ ಅದು ಅದು ಸಂತೋಷ ಪಡುವುದಿಲ್ಲ. ಅದು ಒಳ್ಳೆಯದನ್ನು ಕಂಡು ಸಂತೋಷ ಪಡುತ್ತದೆ. ಅನ್ಯರ ತಪ್ಪನ್ನು ತೋರಿಸಲು ಅದು ಹಿಂಜರಿಯುತ್ತದೆ ಅದು ನಂಬಲು ಸದಾ ಸಿದ್ಧ. ಅದು ಯಾವಾಗಲೂ ಆಶಾಪೂರಿತವಾಗಿರುತ್ತದೆ. ಯಾವಾಗಲೂ ಶಾಂತವಾಗಿರುತ್ತದೆ. ಅದು ಎಂದೂ ಪೂರ್ತಿ ಅಗೋಚರವಾಗುವುದಿಲ್ಲ. ಮುಂದೆ ಆಗುವ ದುರ್ಮ್ಯಾನಗಳನ್ನು ಹೇಳುವ ಭವಿಷ್ಯಕಾರರ ಮಾತನ್ನು ಸುಳ್ಳಾಗಿಸುತ್ತದೆ. ಕೊನೆಗೆ ಆಡಿಕೊಳ್ಳುವ ಬಾಯಿಗಳು ಮೂಕವಾಗುತ್ತವೆ, ಜ್ಞಾನ ಹಿಂದೆ ಬೀಳುತ್ತದೆ. ಆದರೆ ಭರವಸೆ, ಶ್ರದ್ಧೆ, ಪ್ರೇಮ ಬಹುಕಾಲ ಬಾಳುತ್ತವೆ. ಆದರೆ ಇವರಲ್ಲಿ ಎಲ್ಲಕ್ಕಿಂತ ಉದಾತ್ತವಾದದ್ದೆಂದರೆ ಪ್ರೇಮವೇ ಆಗಿದೆ. "

ಈ ಸದ್ಗುಣಗಳನ್ನು ಹೊಂದಿದ ಮನುಷ್ಯ ದೇವರಲ್ಲಿ ನಂಬಿಕೆಯುಳ್ಳವನಾಗಿ, ಧರ್ಮಪ್ರವೃತ್ತಿಯುಳ್ಳವನಾಗಿದ್ದರೆ ಅವನ ಜೀವನ ಇನ್ನಷ್ಟು ಸುಖಮಯವಾಗಬಲ್ಲದು. ನಾವು ದೇವರ ಬಗ್ಗೆ, ಶ್ರದ್ಧೆಯ ಬಗ್ಗೆ ಏನೇ ಹೇಳಿದ್ದರೂ' ಮನುಷ್ಯನ ನೈತಿಕ ಜೀವನಕ್ಕೆ ಆತ ಪಾಪ ಭೀರು ಆಗಿರುವದಕ್ಕೆ ಮುಖ್ಯ ಕಾರಣವೆಂದರೆ ದೇವನೊಬ್ಬ ಇದ್ದಾನೆ, ಆತ ಸರ್ವವ್ಯಾಪಿ, ನಮ್ಮ ಎಲ್ಲ ಕೃತಿಗಳನ್ನೂ ಆತ ನೋಡುತ್ತಿರುತ್ತಾನೆ. ನಮ್ಮ ಪಾಪಕೃತ್ಯಗಳಿಗೆ ತಕ್ಕ ಪ್ರಾಯಶ್ಚಿತ್ತ, ಪುಣ್ಯ ಕಾರ್ಯಗಳಿಗೆ ತಕ್ಕ ಪ್ರತಿಫಲ ಕೊಡುತ್ತಾನೆ ಎಂಬ ನಂಬಿಕೆ ಮನುಷ್ಯನನ್ನು ಸದಾ ಸತ್ಪಥದಲ್ಲಿಡಲಿಕ್ಕೆ ಕಾರಣೀಭೂತವಾಗಿದೆ ಎಂಬುದನ್ನು ಇಲ್ಲಿಯವರೆಗಿನ ಮಾನವನ ಇತಿಹಾಸ ತೋರಿಸಿಕೊಟ್ಟಿದೆ.

**ಸದ್ಗುಣಗಳು:**

ಇದರೊಂದಿಗೆ ಸ್ವಲ್ಪ ಸಮಾಧಾನ ಚಿತ್ತತೆಯನ್ನು ಬೆಳೆಯಿಸಿಕೊಂಡರೆ ಮನುಷ್ಯ ನಿಜವಾಗಿಯೂ ಸುಖಿಯಾಗಬಲ್ಲ. ಸಮಾಧಾನ ಚಿತ್ತವುಳ್ಳವನು, ತಾಳ್ಮೆಯುಳ್ಳವನೂ ನಿರ್ಲಿಪ್ತನೂ ಆಗಿರುತ್ತಾನೆ. ತನ್ನ ತಾತ್ವಿಕ ನಿಲುಮೆಯಿಂದ ನೋವನ್ನು ಸಹನೆಯಿಂದ ಆತ ಸಹಿಸಿಕೊಳ್ಳುತ್ತಾನೆ. ಯಾಕೆಂದರೆ ಹುಟ್ಟಿದ ಮನುಷ್ಯ ಎಂದಾದರೊಮ್ಮೆ ನೋವನ್ನು ಅನುಭವಿಸಲೇ ಬೇಕು ಎಂಬುದನ್ನು ಆತ ಅರಿತಿರುತ್ತಾನೆ. ನಿತ್ಯ ಜೀವನದಲ್ಲಿ ವಿನಯ ಹಾಗೂ ಸೌಜನ್ಯ ಯುತವಾದ ನಡವಳಿಕೆ, ಮತ್ತೊಬ್ಬರ ಭಾವನೆಗಳ ಬಗ್ಗೆ ಗೌರವ ಭಿನ್ನಾಭಿಪ್ರಾಯಗಳ ಬಗೆಗೆ ಸೈರಣೆ ಹಾಗೂ ನಮ್ಮಿಂದಾದ ತಪ್ಪುಗಳನ್ನು ಒಪ್ಪಿಕೊಳ್ಳುವ ದೊಡ್ಡ.ಗುಣ ಇವುಗಳು ಬಹಳ ಮಹತ್ವದ ಸದ್ಗುಣಗಳು.

ಜೀವನದ ಕಟು ಅನುಭವಗಳನ್ನು ನಿರ್ವಿಕಾರದಿಂದ ಎದುರಿಸಲು ಸಹಾಯಕವಾಗುವ ಇನ್ನೊಂದು ಗುಣವೆಂದರೆ ವಿನೋದ ಪ್ರವೃತ್ತಿ. ಉಳಿದ ಗುಣಗಳೊಂದಿಗೆ ಈ ಗುಣವನ್ನು ಅಳವಡಿಸಿಕೊಂಡರಂತೂ ಜೇನಿಟ್ಟಂತೆ.

**ಸುಖಪ್ರಾಪ್ತಿ ಯೆಂತು ?**

ಸುಖವೆಂಬುದು ಬಹುಮಟ್ಟಿಗೆ ಮನುಷ್ಯನ ಮನಸ್ಸಿನ ಸ್ಥಿತಿ, ಅದನ್ನು ಪಡೆಯಬೇಕಾದರೆ ಉದಾತ್ತ ಮೌಲ್ಯಗಳೊಂದಿಗೆ ಮನುಷ್ಯ ಹಲವು ಸಾಧನ ಮಾರ್ಗಗಳನ್ನು ಅನುಸರಿಸಬೇಕು. ಇವುಗಳಲ್ಲಿ ಅತೀ ಮುಖ್ಯವಾದದ್ದೆಂದರೆ ವಿಚಾರ ಪೂರ್ಣವಾದ ಪರಿಶ್ರಮ ಜೀವನದಲ್ಲಿ ಯಶಸ್ಸಿಗೆ, ಸುಖಕ್ಕೆ ಅಡ್ಡದಾರಿಗಳಿಲ್ಲ. ಅದಕ್ಕೆ ನೇರವಾದ ದಾರಿಯೊಂದೇ ಅದು ದುಡಿತದ ದಾರಿ. ಪರಿಶ್ರಮದ ದಾರಿ. ಆದರಲ್ಲಿಯೇ ನಿರಂತರವಾದ ಸುಖವಡಗಿದೆ. ಶಾಸ್ತ್ರಜ್ಞನಲ್ಲಿ. ಕಲಾವಿದನಲ್ಲಿ, ಶಿಲ್ಪಿಯಲ್ಲಿ, ಕಾಣಬಹುದಾದ, ಶ್ರದ್ಧೆಯಿಂದ, ಪ್ರಾಮಾಣಿಕತೆಯಿಂದ ಹಾಗೂ ಶ್ರೇಷ್ಠತೆಯ ಆದರ್ಶದಿಂದ ಮಾಡುವ ಕಾಯಕದಲ್ಲಿಯೇ ಜೀವನದ ಪರಮಾನಂದವಾಗಿದೆ. ಕಾಯಕದ ಮುಖಾಂತರ ಮನುಷ್ಯ ತನ್ನ ಜೀವನದ ಅರ್ಥ ಅದರ ಸಾರ್ಥಕತೆಯನ್ನು ಕಂಡುಕೊಳ್ಳುತ್ತಾನೆ. ಅದರ ಮುಖಾಂತರ ಆತ ತನ್ನ ಜೀವನದ ಸಂಸ್ಕೃತಿಯ ಶಿಖರವನ್ನು ಕಟ್ಟುತ್ತಾನೆ. ಅವನಲ್ಲಿ ಹುದುಗಿದ ಪ್ರತಿಭೆ, ಹಾಗೂ ಶಕ್ತಿಗಳು ಅವನ ವ್ಯಾವಹಾರಿಕ ಜೀವನದಲ್ಲಿಯೇ ಆಗಲಿ, ಬೌದ್ಧಿಕ, ಸಾಮಾಜಿಕ ಅಥವಾ ಕಲಾತ್ಮಕ ಜೀವನದಲ್ಲಿಯೇ ಆಗಲಿ ಸಫಲತೆಯನ್ನು ಪಡೆಯುತ್ತವೆ. ಯಾವುದೇ ತರಹದ ಫಲದಾಯಕವಾದ ರಚನಾತ್ಮಕವಾದ ಕಾರ್ಯದಲ್ಲಿ ತೊಡಗಿ ನೆರವಾಗುವದಿಲ್ಲವೋ ಆತ ಅರ್ಥಪೂರ್ಣವಾದ ಸುಖ ಜೀವನವನ್ನು ಬದುಕಲಾರ. ನಾನು ಕೇವಲ ನಮ್ಮ ಉಪಜೀವನಕ್ಕಾಗಿ ನಾವು ಮಾಡುವ ಕೆಲಸದ ಬಗ್ಗೆ ಮಾತನಾಡುತ್ತಿಲ್ಲ. ಅದೂ ಕೂಡ ಮಹತ್ವವಾದದ್ದೆಂಬುದನ್ನು ನಾನು ಬಲ್ಲೆ.

( 26 ನೇ ಪುಟ ನೋಡಿ )

## ಕಾವ್ಯವಾಹಿನಿ






—ಎನ್. ಪಂಕಜ

ಓ ಹಂಪೆ ! ಕರ್ನಾಟಕ ಜಗದಂಬೆ !
ಏನಿದು ನಿನ್ನಯ ದುರಾವಸ್ಥೇ !
ಮುತ್ತು ರತ್ನಗಳ ಬೀದಿಗಳಲ್ಲಿ ಇಂದು ಹಂದಿಗಳ ಸಾಲು !
ಭವ್ಯ ಅರಮನೆಗಳಲಿ ಅರಮನೆಗಳಲಿ ಸಿನಿಮಾ ತೆಗೆಯುವವರ ಬೀಲು !
ರಮ್ಯ ನರ್ತದ ದಿಬ್ಬಗಳ ಮೇಲೆ ಪ್ರವಾಸಿಗಳ ಹರಟೆ !
ಖ್ಯಾತ ಗಜಶಾಲೆಗಳಲ್ಲಿ ನಾಯಿಗಳ ಹಾವಳಿ !
ಓ ಹಂಪೆ! ಕರ್ನಾಟಕ ಜಗದಂಬೆ !
ಏನಿದು ನಿನ್ನಯ ದುರವಸ್ಥೆ !

ಎತ್ತ ನೋಡಿದರತ್ತ ಅವಶೇಷಗಳ ಸಮೂಹ !
ನಿನ್ನಯ ನೆನ್ನಿನ ವೈಭವ–ಏನಾಯಿತೀಗ ?
ಕೇಳುವುದೆಲ್ಲ–ನೋಡುವುದೆಲ್ಲ–ಒಂದೇ,
ದಂತ ಕಥೆಗಳೆನಿಸುವುದೀಗ !
ಕೇಳುತ್ತ–ನೋಡುತ್ತ,
ಧಗ ಧಗ ಉರಿಯುವುದು ಕನ್ನಡಿಗನ ಹೃದಯ ;
ಹೇ ಹಂಪೇ, ಕರ್ನಾಟಕ ಜಗದಂಬೆ !
ಏನಿದು ನಿನ್ನಯ ದುರವಸ್ಥೆ !

ವೀರ ಪುತ್ರ ಪುತ್ರಿಯರ ಮಾತೆಯಾಗಿದ್ದೂ
ಬಿದ್ದೆಯಾ ಬೀದಿಗಳಲಿ ಅನಾಥೆಯಂತೆ?
ಧರ್ಮಸಾರುವ ದಿವ್ಯ ದೇಶವಾಗಿದ್ದೂ,
ನರಕ ದು:ಖ ಹೊತ್ತೆಯಾ ಪಾಪಿಯಂತೆ?
ಹೊನ್ನು ಹಾಲು ತೇಲುವ ರಸ್ತೆಗಳಲಿ—
ರಕ್ತ ಹರಿಯಿತೆ ಕಾಲುವೆಗಳಲಿ!
ಹೇ ಹಂಪೆ, ಕರ್ನಾಟಕ ಜಗದಂಬೆ!
ಏನಿದು ನಿನ್ನಯ ದುರವಸ್ಥೆ !

ಸುಮ್ಮನಾದರೇಕೆ ವಿದ್ಯಾರಣ್ಯರು,
ಭಯಂಕರ ತಾಳಿಕೋಟೆಯಂದು ?
ಹೂಂಕರಿಸಿ ಎದ್ದು ಬರಲಿಲ್ಲವೇಕೆ ಕೃಷ್ಣರಾಯ–
ತನ್ನ ಪ್ರಾಣಪ್ರಿಯ ವಿಜಯನಗರ ನಾಶವಾದಾಗ
ಉಸುರಲಿಲ್ಲವೇಕೊಂದು ಉಪಾಯವನು ;
ಚಾಣಾಕ್ಷ ತಿಮ್ಮರಸನು ರಾಮರಾಯನ ಕಿವಿಗಳಲಿ
ಹೇ ಹಂಪೇ,ಕರ್ನಾಟಕ ಜಗದಂಬೆ!
ಏನಿದು ನಿನ್ನಯ ದುರವಸ್ಥೆ!

"ಸೈರಿಸು ಕನ್ನಡಿಗಾ ಸೈರಿಸು !
ಇಂದಿನಂತೆ ಅಂದೂ–ಅಂದಿನಂತೆ ಇಂದೂ,
ವೈಭವ–ಯುದ್ಧ–ಹತ್ಯೆ–ನಾಶ,
ಎಲ್ಲ ನೋಡುತಿಹೆ ಸ್ಮಿತವದನದಿಂದ ನಿಂದು !
ರಕ್ತ ಹರಿದ ಈ ಬೀದಿಗಳಲಿ ಮತ್ತೀಗ,
ಧರ್ಮಬಿತ್ತಿ ಎತ್ತರೆತ್ತರ ಬೆಳೆಸಿಸಿ,
ಹಂಪೆಯ ಕಣ್ಣೀರ ಒರೆಸಬೇಕು—ಓ ಕನ್ನಡಿಗಾ!"
ನಡಿವುದಿದನೆ ವಿರೂಪಾಕ್ಷನ ಗುಡಿಯ ಗಂಟೆ—ನಮಗೆಲ್ಲ

# ಕೊಂಡಿಗಳು

ವಯಸ್ಸಿಗೆ ಬಂದ ಮಗಳು ಕಾಲೇಜಿನಿಂದ ಗಂಟೆ ಎಂಟಾದರೂ ಮನೆಗೆ ಬಾರದಿದ್ದಾಗ ರಾಜಮ್ಮನ ಮನಸ್ಸಿನ ಕಳವಳ ಇಲ್ಲದ ಊಹಾಪೋಹಗಳಿಗೆ ಎಡೆಕೊಟ್ಟಿತು.

—ಈಚನೂರು ಜಯಲಕ್ಷ್ಮಿ

ತಿಂಡಿಯಾಯಿತು.... ಕಾಫಿಯನ್ನು ಫ್ಲಾಸ್ಕಿನಲ್ಲಿ ತುಂಬಿಯೂ ಆಯಿತು. ದಿನಾಲು ಹೀಗೆ ಕಾಫಿಯನ್ನು ಫ್ಲಾಸ್ಕಿಗೆ ಹಾಕಿ....ತಿಂಡಿ ಆರುವುದನ್ನು ಕಾಯುವ ಅಗತ್ಯವಿಲ್ಲ....ಹೇಮಾ ಎಲ್ಲೇ ಇರಲಿ, ಎಂತೇ ಇರಲಿ.... ಐದುವರೆಯ ಹೊತ್ತಿಗೆ ಗೇಟು ಶಬ್ದ ಮಾಡುತ್ತಿದ್ದಳು.... ಇಂದು....? ಗಂಟೆ ಆರಾದರೂ ಇಲ್ಲ. ರಾಜಮ್ಮ ಹುಬ್ಬು ಹೆಣೆದು ಫ್ಲಾಸ್ಕನ್ನು ಟೇಬಲ್ ಮೇಲಿರಿಸಿ,.... ಮುಖ ತೊಳೆದುಕೊಂಡು, ಕುಂಕುಮ ಇಟ್ಟುಕೊಂಡು ಧಡಧಡನೆ ಗೇಟಿಗೆ ಬಂದು ನಿಂತರು.... ನಿಟ್ಟುಸಿರಿನೊಂದಿಗೆ ಅತ್ತಿತ್ತ ಕಂಗಳು ಭರದಿಂದ ಓಡಿಯಾಡಿ ದಣಿದವು........ 'ಯಾಕಿಷ್ಟು ಹೊತ್ತು'....?....ಎಂದು ತಮ್ಮನ್ನು ತಾವೇ ಪ್ರಶ್ನಿಸಿಕೊಂಡ ತಾಯಿಯ ಕಣ್ಮುಂದೆ ಬಂದ ದುರಂತ ಚಿತ್ರ ಹಲವಾರು. ಕಾಲೇಜಿನಿಂದ ಬರುತ್ತಿದ್ದ ಹುಡುಗಿಯ ಪಕ್ಕದಲ್ಲಿ ಕಾರೊಂದು, ಸ್ವಲ್ಪ ಮುಂದೆ ಹೋಗಿ, ಸರ್ರನೆ ತಿರುಗಿ ಬಂದು ಅವಳ ಪಕ್ಕದಲ್ಲಿ ಫಕ್ಕನೆ ಕಾರು ನಿಲ್ಲಿಸಿ,.... ಧಾಂಡಿಗರಿಬ್ಬರು ಸರ್ರನೆ ಇಳಿದು, ಹುಡುಗಿ ತಬ್ಬಿಬ್ಬಾಗಿ ಬೆದರಿ, ಕಿರಿಚುವುದರೊಳಗೆ, ಮುಖದ ಮೇಲೆ ಬಟ್ಟೆ ಎಳೆದು, ಹುಡುಗಿ ಒದ್ದಾಡಿ, ಸೋತು ಕಣ್ಮುಚ್ಚಿದಾಗ, ಅವಳನ್ನು ಕಾರಿನೊಳಕ್ಕೆ ಎಳೆದು...........

ಗಡಗಡನೆ ಶರೀರ ನಡುಗಿ, ತೋಲನ ತಪ್ಪಿದಂತಾಗಿ, ಗೇಟಿಗೆ ಮೈ ಆದರಿಸಿ ಮುಖದ ಮೇಲಿನ ಬೆವರು ತೊಡೆದರು ತಾಯಿ....ಹಾಗೇನಾದರೂ ಆಗಿರಬಹುದೇ ಹೇಮಿಗೆ....? ಹುಡುಗಿಗೆ ಹೆಚ್ಚಾಗಿ ಗೆಳತಿಯರೇ ಇಲ್ಲ....ಕಾಲೇಜಿಗೆ ಹತ್ತಿರದ ಮನೆಯ ನೀರಜ ಒಬ್ಬಳ್ಳನ್ನುಳಿದು ಇವಳಿಗೆ ಗೆಳತಿಯರೇ ಬೇಡ. ಸದಾ ಶಾಂತಿ ಬಯಸಿ, ಸೌಮ್ಯತೆ ಬೀರುವ ಹುಡುಗಿ, ಎತ್ತಲೋ ಯೋಚಿಸುತ್ತಾ ನಡೆದು ಬರುವಾಗ....?

"ಏನ್ ನಿಂತ್‌ಬಿಟ್ರಿ ರಾಜಮ್ಮ?
ಹೇಮಾ ಬಂದಿಲ್ವೇನು "....?

ಧನಿ ಬಂದತ್ತ ತಿರುಗಿದರು....ಪಕ್ಕದ ಮನೆಯ ಕುಮುದಮ್ಮ ಕಣ್ಗಳಲ್ಲಿ ಕುತೂಹಲ ಚಿಮ್ಮಿಸಿ ನಿಂತಿದ್ದಾರೆ. ಆಕೆಗೆ ತಮ್ಮ ಚಿಕ್ಕದಾದ ಸಂಸಾರ ಚೊಕ್ಕ ಸಂಸಾರ ಕಂಡರೆ ಅಸೂಯೆ ಎಂಬುದು ರಾಜಮ್ಮನವರಿಗೆ ಗೊತ್ತು ಆದರೆ ಇಂಥ ಹೆದರಿದ ಸಮಯದಲ್ಲಿ ಸಾಂತ್ವನ ನೀಡುವ ಜೀವವೊಂದು ಆಸರೆಯಾದರೆ.....?...?

"ಇಲ್ಲವಮ್ಮಾ ಆರಾದ್ರೂ ಹೇಮಾ ಏಕೋ ಬಂದಿಲ್ಲ. ಅವಳು ಎಂದೂ ಹಾಗೆ ಮಾಡಿದ್ದಿಲ್ಲ. ಅವಳ ತಂದೆ ಊರಿನಲ್ಲೂ ಇಲ್ಲ. ಈಗ ಏನಪ್ಪ ಮಾಡೋದು ಅನ್ನಿಸಿದೆ.... ಹುಡುಗಿ ಯಾಕೆ ಹೀಗೆ ಮಾಡಿದ್ಲೋ...."

ಕೊನೆಯ ವಾಕ್ಯ ಗೊಣಗುವಿಕೆಯಲ್ಲಿ ಮುಕ್ತಾಯವಾಯಿತು ಪುನಃ ಮೂಗಿನ ಮೇಲೆ ಬೆವರುವ ಮತ್ತು ಹೃದಯದ ದಡಗುಟ್ಟುವಿಕೆ.

ಅಯ್ಯೋ ಬರ್ತಾಳೆ ಬಿಡಿ ಆದ್ರೆ ತಾಯಿ–ತಂದೆ ಹೀಗೆ ಚಿಂತಿಸಾರೆಂತಾ, ಇವ್ರಿಗೆ ಗೊತಾಗ್ಬಾರ್ದೆ.... ಏನು ಈಗಿನ ಹುಡುಗಿರೋ.... ಏನೂ ಅಧ್ವಾನವೋ....?

ನೆರೆಮನೆಯಾಕೆಯ ಗೊಣಗಾಟ ತಾಯಿಗೆ ಅಸಹನೀಯವಾಯ್ತು. ಹೀಗೆ ಬಿಟ್ಟರೆ ಹೇಮಳ ವೈಯು

ಕ್ತಿಕ ವಿಷಯದ ತನಕವೂ, ಗೊಣಗಾಟ ಲಂಬಿಸಿದರೂ ಹೆಚ್ಚಿಲ್ಲ. ಎನಿಸಿದಾಗ ಬೆನ್ನುತುಂಬ ಸೆರೆಗೆಳೆದು ಬಾಗಿ ಲತ್ತ ತಿರುಗಿದರು.

"ಎನಿಲ್ಲಾ ಕುಮುದಮ್ಮಾ, ಬರ್ತಾಳೆ ಬಿಡಿ.... ಏನಾದ್ರೂ ಕಾಲೇಜಿನಲ್ಲಿ ಕಾರ್ಯಕ್ರಮ ಇದೆಯೋ ಎನೋ, ನಾವ್ಯಾಕೆ ಇಷ್ಟು ಗಾಬರಿಯಾಗ್ಬೇಕು....ಒಳಗೆ ಬೇಸರವಾಗಿ ಬಂದು ನಿಂತೆ. ಬರ್ತೀನೆ, ಒಲೆಮೇಲೆ ಹಾಲಿದೆ"

ಮಾತಿನೊಂದಿಗೆ ಬಾಗಿಲು ರಪ್ಪನೆ ಮುಚ್ಚಿದಾಗ, ತುಸು 'ಹಾಯ್', ಎನಿಸಿತು ರಾಜಮ್ಮನವರಿಗೆ. ಕುಮು ದಮ್ಮ ಅಂದಂತೆ ಏನು ಹುಡುಗಿಯೋ....? ಇಷ್ಟು ವಯಸ್ಸಾದರೂ ಹೊಣೆ ಬೇಡವೇ....? ಆದರೂ ಹೇಮಾ ಹೊಣೆಗೆಟ್ಟವಳು ಅನ್ನಲಾಗುವುದೇ....? ಇನ್ನು ನಾಲ್ಕು ದಿನ ಪಪ್ಪ ಊರಿನಲ್ಲಿರುವುದಿಲ್ಲ, ಎಂದು ತಿಳಿದವಳು, ಬೆಳಗ್ಗೆ ಏಳುವಾಗಲೇ, ... "ಅಮ್ಮಾ ನಿಂಗೆ ಒಬ್ಬಳಿಗೇ ಬೇಸರ.... ಇವತ್ತು ನಾಳೆ ಲೀವ್ ಬರೀತೀನಿ...." ಎಂದು ವಾತ್ಸಲ್ಯ ಉಕ್ಕಿಸಿದಾಗ,.... "ಏನೂ ಬೇಡಮ್ಮಾ... ಪಾಠ ಯಾಕೆ ಕಳ್ಕೋತಿ? ಸಂಜೆಗೆ ಮನೇಲೇ ಇರ್ತೀಯಾಲ್ಲಾ" ....ಎಂದುಸುರಿ– "ನಿನ್ನ ಅಮ್ಮನ ಮೇಲಿನ ಪ್ರೀತಿ ಇನ್ನು ಎರಡೇ ತಿಂಗಳು. ಮನೋಜ ಬಂದ್ಮೇಲೆ ಈ ಅಮ್ಮನ ಜ್ಞಾಪಕ ಎತ್ತೆತ್ತಲೋ...." ಎಂದು ತಾವು ಹಾಸ್ಯ ಮಾಡಿದಾಗ...."ಥೂ .... ಹೋಗಮ್ಮಾ, ಹಾಗೆಲ್ಲಾ ಅಂದ್ಕೋಬೇಡಾ ... ಈ ಹೇಮಾ, ಅಂಥವಳಲ್ಲ ಓಹ್ ಎಂಥಾ ಕೆಲ್ಸ ಮಾಡಿದಿರಮ್ಮಾ ನೀನು ಪಪ್ಪಾ ಸೇರಿ"....? ಎಂದು ಕೆನ್ನೆ ಉಬ್ಬಿಸಿ, ಹುಬ್ಬು ಹೆಣೆದಾಗ ತಾವು ಆತಂಕದಿಂದ.... "ಏನೇ ಅದು...."? ಎಂದು ಕೇಳಿದಾಗ, ...."ತಪ್ಪು ತಪ್ಪು, ಶುದ್ಧ ತಪ್ಪು, ನನಗೊಬ್ಬ ಇದ್ದಿದ್ರೆ ಎಷ್ಟು ಮೋಜು ಇರ್ತಿತ್ತು.... ಆಗ ನನಗೆ, ನಿಮ್ಮ ಬಗ್ಗೆ ಆತಂಕ ಇರ್ತಿತ್ತೆ.... ಥೂ...." ಎಂದು ಮುಖ ಮುಚ್ಚಿ, ಕಿಲಿಕಿಲಿನೆ ನಕ್ಕು ತಮ್ಮ ಬೆನ್ನ ಮೇಲೆ ಮುಖವಿರಿಸಿ, ತಮ್ಮ ಮೇಲಿ ಕೆಂಪಡರುವಂತೆ ಮಾಡಿದ್ದ, ಸರದಿ ಹುಡುಗಿಗೆ ಏನಾಯ್ತು ? ಏನಾಯಿತು....?....?

ಗೇಟು ಶಬ್ದವಾದಾಗ ಹಾರಿ ಬಂದರು ತಾಯಿ ....ಉತ್ಸಾಹ ಅಳಿದು ಕಣ್ಣು ಸೋತು ಮಲಗಿತು. ದಾರಿಯಲ್ಲಿ ಹೋಗುವ ಮಕ್ಕಳು ಗೇಟು ತಳ್ಳಿ ಓಡಿದ್ದರು. ನಿಧಾನವಾಗಿ ಬಾಗಿಲು ತೆರೆದು, ಗೇಟು ಮುಚ್ಚಿ ಒಳ ಬಂದು....ಹೊಸಿಲು ತುಳಿಯುವಾಗ,...."ಹುಡುಗೀನ ಹದ್ದುಬಸ್ತಿನಲ್ಲಿಟ್ರೆ, ವೇಳೆ ಯಾಕೆ ಮಾಡ್ತಾರೆ.... ಹಾದಿ ಯಾಕೆ ತಪ್ತಾರೆ? ಕಾಲುಜಾರ್ತಾರೇಕೆ? ನೀವು ಏನೇ ಅನ್ನಿ ಕಮಲಮ್ಮ, ಅವಳನ್ನ ರಾಜಮ್ಮ ಮುದ್ದಿಸಿ ಕೆಡ ಸಿದ್ದಾರೆ... ಅವಳೋ....? ಅವಳ ವೇಷವೋ....? ರಾಮಾ ರಾಮಾ...."

ಕಣ್ಮುಚ್ಚಿ, ಹಲ್ಲಿನಿಂದ ಬಿಗಿಯಾಗಿ ಕೆಳದುಟಿ ಕಚ್ಚಿ, ಒಳಗೆ ಬಂದು ರಪ್ಪನೆ ಬಾಗಿಲು ಹಾಕಿದರು ರಾಜಮ್ಮ. ಎಡಬಲದ ಮನೆಯ ಗೃಹಿಣಿಯರ ಅಭಿಪ್ರಾಯ, ತಮ್ಮ ಹೇಮಾಳ ಬಗೆಗೆ. ಓ ! ! ದೇವರೇ....ಹೇಮಾ ತಡ ವಾಗಿ ಮನೆಗೆ ಬಂದರೂ ಬಂಲಿ....ಆದರೆ....?

ಹೇಮಾ ಎಡಗೈಲಿ ಪುಸ್ತಕ ಹಿಡಿದು ಬಳುಕಿ ಬರುತ್ತಿದ್ದಾಳೆ; ಫುಟ್‌ಪಾತಿನಲ್ಲಿ.... ಅನ್ಯಮನಸ್ಕತೆ, ಹಿಂದಿನಿಂದ ಬಸ್ ಹಾರ್ನ್ ಮಾಡಿದಾಗ, ಎಚ್ಚೆತ್ತು ಬೆಚ್ಚಿ, ಪಕ್ಕಕ್ಕೆ ಸರಿಯುವಾಗ, ಎದುರಿಗೆ ಬಂದ ಸ್ಕೂಟರ್ ಅವಳ ಮೇಲೆ ಹರಿದು....

ಸೋಫಾದಲ್ಲಿ ಕುಳಿತು ಬಾಗಿ, ಫ್ಯಾನಿನ ಸ್ವಿಚ್ ಒತ್ತಿ ಗಾಳಿಗೆ ಮೈಯೊಡ್ಡಿದರು. ಎಂಥ ಬಿರುಗಾಳಿಗೂ ಜಗ್ಗದ ಕಾವು ಅದು. ಮಗಳ ಈ ದುರಂತ ನೆನೆದೊ ಡನೆಯೇ ಕಣ್ಣು ಅಚಾನಕವಾಗಿ, ದೇವರ ಫೋಟೋ ದತ್ತ ಚಲಿಸಿದಾಗ, ಮನ ದೊಡ್ಡ ಮೊತ್ತದ ಮುಡಿಪು ಕಟ್ಟಲು ನಿಶ್ಚೈಸಿ, ಸರಸರನೆ ಕೈ ಕಾಲು ತೊಳೆದು ಬಂದು ಗಂಧದ ಕಡ್ಡಿ ಹಚ್ಚಿ, ಕೈಮುಗಿದು ಕಣ್ಮುಚ್ಚಿದಾಗ, ಏನೋ ಒಂದು ಬಗೆಯ ನೆಮ್ಮದಿ ಎನಿಸಿದರೂ, ಆಯ ತಪ್ಪಿದ ಎದೆ ಬಡಿತ, ಒಂದು ಹಂತಕ್ಕೆ ಬಂದಿಲ್ಲ.

ಪುನಃ ಅದೇ ತೊಳಲಿಕೆ. ಹೇಮಾಗೆ ಏನ ಗಿದೆ ? ನೀರಜಳಿಗಾದರೂ ಫೋನ್ ಮಾಡುವಾ ಅಂದರೆ, ಅವರ ಮನೆಯ ಫೋನ್ ನಂಬರ್ ತಮಗೆ ಗೊತ್ತಿಲ್ಲ. ಅದೆಲ್ಲಾ ಏನಿದ್ದರೂ, ತಂದೆ, ಮಗಳ ವ್ಯವಹಾರ. ಈಗೇನು ಮಾಡುವುದು ? ಕಾಲೇಜಿನಲ್ಲಿ ಫಂಕ್ಷನ್ ಇದ್ದಿ ದ್ದರೆ, ಹೇಳಲು ಮರೆಯುತ್ತಿರಲಿಲ್ಲ. ಫಂಕ್ಷನ್ ಇದ್ದರೂ ಅದರಿಂದ ತಪ್ಪಿಸಿಕೊಂಡು ಮನೆಗೆ ಓಡಿಬರುತ್ತಿದ

ಹುಡುಗಿ ಇಂದೇಕೆ ಹಾಗೆ ಮಾಡಿದಳು.....? ಹೋಗಿರುವುದಾದರೂ ಎಲ್ಲಿಗೆ....?.?

ಊಹೆ ಹಿಡಿತಕ್ಕೆ ಸಿಕ್ಕದೆ, ಕಟ್ಟು ಕಳಚಿದ ಪಂಜಿನಂತೆ ಚೆಲ್ಲಾಡಿತು....ಕುಮುದಮ್ಮ ಅಂದದ್ದೇನು....? ಕಾಲು ಜಾರುವುದು.... ಹಾದಿ ತಪ್ಪುವುದು !.... ಥೂ !, ಎಂಥಾ ಹೊಲಸು ಯೋಚನೆ ಅಕೆಯದು....? ಹೂಂ .... ಮಗಳ ಕೆಲಸದಿಂದಾಗಿ, ಆಕೆಗೆ ಈ ಅಭಿಪ್ರಾಯ ಬಂದಿದ್ದರೂ ಹೆಚ್ಚಲ್ಲ ಅಲ್ಲವೇ....? ಏರುತ್ತಿರುವ ವಯಸ್ಸು.... ಉಕ್ಕುವ ಪ್ರಾಯ.... ಪ್ರಕೃತಿಯ ಸಹಜ ಧರ್ಮ, ಪುರುಷನತ್ತ ವಾಲುವುದೇ ಅಲ್ಲವೇ....? ಹಾಗೇನಾದರೂ ಹೇಮಾ .... ?

ತುಟಿ ಕಚ್ಚಿ ನಿಂತರು. 'ಹೇಮಾ ಅಂಥವಳಲ್ಲ' ಎಂದು ನಾಲಿಗೆ ಪ್ರತಿಭಟಿಸಿದರೂ, ಮನ ಕೇಳದು-ತಿವಿದು ತಿವಿದು ವಾದಿಸುತ್ತಿದೆ.

ಹಾಲು ಉಕ್ಕಿ ಹರಿದು, ಸ್ಟೋವ್ ಸಪ್ತ ಸ್ವರ ಹೊರಡಿಸಿದಾಗ ಧಡಧಡನೆ ಓಡಿ ಅಳಿದುಳಿದ ಹಾಲನ್ನು ಕೆಳಗಿಳಿಸಿದರು....ಹಾಲು ಸುಟ್ಟ ವಾಸನೆ ಅಡಿಗೆಮನೆಯನ್ನು ಆವರಿಸಿತು. ಆದರೆ ಆಕೆಗೆ ಇದಾವುದರ ಗಮನವಿಲ್ಲ. ಹೇಮಳ ಏರಿದ ಯೌವ್ವನದ ಮೇಲೇ ಕಣ್ಣು. ತಾವು ತುಸು, ಎಚ್ಚರ ತಪ್ಪಿದ್ದರಿಂದ ಹಾಲು ಉಕ್ಕಿ ಹರಿಯಿತು. ಹಾಗೇ ತಮ್ಮ ಮುದ್ದಿನ ಪ್ರಭಾವದಿಂದ, ಉಕ್ಕುವ ಯೌವನವನ್ನು ಯಾವುದೋ ದುರ್ಬುದ್ಧಿಯ ಸುಳಿಗೆ ಸಿಕ್ಕಿ ಚಲ್ಲಾಡಿದರೆ....?....?

† † † † † †

ತಟ್ಟನೆ ಅವರಿಗೆ ಆ ದಿನದ ನೆನಪು ಬಂತು ಹೇಮಾ ಸ್ನಾನ ಮಾಡಲು ಹೋಗಿದ್ದಾಗ....ತಾವು, ಯಾವುದೋ ಸಾಮಾನು ಹುಡುಕುತ್ತಾ ಆವಳ ರೂಮಿಗೆ ಬಂದಾಗ ಕಣ್ಣು ಸಹಜವಾಗಿ ಅವಳ ಮಂಚದತ್ತ ಹೋಗಿತ್ತು. ಅಸ್ತವ್ಯಸ್ತವಾದ ಹಾಸಿಗೆ....ಹೊದಿಕೆ.... ದಿಂಬು....ಹೊಣೆಗೆಟ್ಟ ಹುಡುಗಿ ಸೋಮಾರಿಯಾಗ್ತಿದ್ದಾಳೆ...." ಎಂದು ಗೊಣಗುತ್ತಲೇ, ಬಂದ ಕೆಲಸ ಮರೆತು, ಹಾಸಿಗೆ ಸರಿಪಡಿಸುತ್ತಾ ನಿಂತಾಗ, ದಿಂಬಿನ ಕೆಳಗೆ ಸಿಕ್ಕಿತು ಆ ಡೈರಿ. ಕುತೂಹಲದಿಂದ ಪುಟ ತಿರುವುತ್ತಾ ನಿಂತರು. ನಾಲ್ಕು ದಿನದ ಹಿಂದೆ ತಾನೇ ಬರೆದದ್ದು ಆ ಸಾಲುಗಳು.

"ಅಬ್ಬಾ!.... ಅಶೋಕನ ಚೆಲುವಿನಲ್ಲಿ ಅದೆಂಥಾ ಆಕರ್ಷಣೆ. ನೋಡಿದವರ ಕಣ್ತುಂಬಿ ಮನ ಕೆಣಕುತ್ತಾನೆ. ಈಚೀಚೆಗೆ ಅಶೋಕ್ ನನ್ನನ್ನು ತುಂಬಾ ಪ್ರೀತಿಸುತ್ತಾನೆ. ನಾನೂ ಕೂಡಾ....ಓಃ ದೇವರೇ ಈ ಪ್ರೀತಿಗೆ ಭಂಗ ಬಾರದಿರಲಿ....

ಕೈಯಿಂದ ಡೈರಿ ಕಳಚಿ ಬಿದ್ದಿತ್ತು. ಅಶೋಕ! ಪ್ರೀತಿ ....ಭಂಗ.... ಓಃಃ....ಏನಿದು......? ಎನಿಸಿ ದಿಗ್ಭ್ರಮೆ ಏರಿ. ಮತ್ತೊಮ್ಮೆ ಡೈರಿ ತೆರೆದು ಅದೇ ವಾಕ್ಯ ಓದಿದ ನಂತರ ಪುಟಗಳನ್ನು ಮುಂದಕ್ಕೆ ತಳ್ಳಿ, ಯಾವ ದಿನದಿಂದ ಅಶೋಕನ ಪ್ರವೇಶವಾಗಿದೆ, ಎಂದು ಹುಡುಕುತ್ತಿರುವಾಗ, ಪತಿ ಕೂಗಿದ ಶಬ್ದ ಕೇಳಿ ಡೈರಿಯನ್ನು ಅಲ್ಲೇ ಎಸೆದು ಓಡುವಾಗ ಪತಿಯೊಡನೆ ಹೇಳಬೇಕೆಂಬ ತವಕ. ಆದರೆ, ಮನ, ಮನದೊಳಗೆ ಈಗಲೇ ಗೊಂದಲವೇಕೆ? ಈಗಲೇ ಅವರಿಗೆ ಆತಂಕ ಉಂಟುಮಾಡುವುದೇಕೇ......? ನೇರವಾಗಿ ಅವಳನ್ನೇ ಕೇಳಿದರೆ....?ಎನ್ನುವ ಸನ್ನಾಹ ಹದಿನೈದು ದಿನಗಳಿಂದ ಸುಳಿದು.... ಮಗಳ ಮುಗ್ಧ ಮೋರೆ ನೋಡಿ, ನಾಲಗೆ ಹೊರಳದೆ, ವಿಫಲರಾಗಿದ್ದರು- ಇಂದು ಕಾಲೇಜಿನಿಂದ ಬಂದ ನಂತರ ಕೇಳಲೇಬೇಕು. ಆದರೆ ಅವಳು ಇಷ್ಟು ಹೊತ್ತಾದರೂ ಬಂದಿಲ್ಲ. ಏಕೇ....? ಏನಾದರೂ ಆ ಅಶೋಕನೊಡನೆ....?....? ....?....?

ಓಃಃ ದೇವರೇ....! ಎನ್ನುತ್ತಾ ತಲೆಯನ್ನು ಬಿಗಿಯಾಗಿ ಒತ್ತಿ ಹಿಡಿದು ಕುಳಿತರು. ಯಾರು ಈ ಅಶೋಕಾ....!....! ಹೇಮಾ ಇಷ್ಟು ಬೇಗ ಮನೋಜನನ್ನು ಮರೆತಳೇ....? "ಹೇಮುಗಾಗಿ ನನ್ನ ಹೃದಯಾನ ಇಲ್ಲಿ ಬಿಟ್ಟಿಟ್ಟು ಹೋಗ್ತಾ ಇದ್ದೀನಿ" ಎಂದು ನಗೆಯಾಡಿ ವಿದೇಶಕ್ಕೆ ಹೋಗಿದ್ದ ಮನೋಜನಿಗೆ ಈ ಸುದ್ದಿ ತಿಳಿದರೆ ಏನಾಗಬೇಡಾ....? "ಅಕ್ಕಾ,.... ಹೀಗೇಕಾಯ್ತು"....? ಎಂದು ತಮ್ಮ ತಮ್ಮನ್ನು ಕೇಳಿದರೆ, ತಾವು ಅವನ ನೋಟ ಎದುರಿಸಬಹುದೇ? "ಇನ್ನು ಎರಡೇ ತಿಂಗಳು.... ನಿನ್ನೆದುರು ನಾನು... ನನ್ನೆದುರು ನೀನು.... ಹೇಮಾ.... ಮನೋಜ್ ಹೇಮಿ"........ಎಂದು ಮನೋಜ್ ತನಗೆ

ಬರೆದುದನ್ನು ತಮ್ಮೆದುರು ಹೇಮಾ ಓದುವಾಗ,....?.... ಹೌದು, ಹೇಮಾ ಏನೊಂದು ಭಾವನೆಯನ್ನು ಬಿಚ್ಚಿ ತೋರಿಸಿರಲಿಲ್ಲ. ಈಗ ಚೆನ್ನಾಗಿ ಜ್ಞಾಪಕಕ್ಕೆ ಬರುತ್ತದೆ.... ಅವಳು ಸತ್ತವರ್ತನೆಗೆ ಈಗೆ ಕಾರಣ ಸಿಗುತ್ತದೆ. ಅಂದರೆ ಹೇಮಾ ಅಶೋಕನಿಗೆ ಮನವರಿಸಿದಳೇ....? ಡ್ಯಾಡಿಯ ಮುಖಕ್ಕೆ ಮುದ್ದಿನ ಮಗಳು ಮಸಿ ಬಳಿದಳೇ....?

ಗೋಡೆಯ ಗಡಿಯಾರ ನಾಲಿಗೆ ಆಡಿಸಿ ಏಳು ಹೊಡೆದಾಗ, ಮನದ ಮೇಲೆ ಸುತ್ತಿಗೆಯಿಂದ ಹೊಡೆದಂತಾಯ್ತು ತಾಯಿಗೆ. ಎರಡು ಗಂಟೆ ತಡ....!....!...!

ಏನೋ ಹೊಳೆದಂತಾಗಿ, ತಾಯಿ ಫೋನಿನ ಬಳಿ ಹೋಗಿ ಡಯಲ್ ಮಾಡಿ, ಕರೆಗಾಗಿ ಕಾಯ್ದರು. ಟ್ರನ್ ಟ್ರನ್ ಶಬ್ದದೊಂದಿಗೆ 'ಹಲೋ, ಎನ್ನುವ ತಂಗಿಯ ಸ್ವರ. "ಯಾಕಕ್ಕ"....? ಎಂದಾಗ ದುಃಖ ಒತ್ತರಿಸಿ ಬಂತು ಅಕ್ಕನಿಗೆ.... ದುಃಖ ನುಂಗಿ ಹೇಮಾ ಏಳಾದರೂ ಮನೆಗೆ ಬರದುದರ ಬಗ್ಗೆ, ಕಳವಳ ತೋರಿಸಿದಾಗ, ಫೋನಿನಾಚೆಯಿಂದ ಎರಡು ನಿಮಿಷ ಮೌನ.... ಕಳವಳ ವ್ಯಕ್ತಪಡಿಸುವ ಸಲುವಾಗಿ ಇರಬಹುದು. ಇತ್ತ ತಾಯಿಯ ಹೃದಯ ನಡುಗಿತು ಆ ಮೌನಕ್ಕೆ.

ಅಕ್ಕಾ ನೀನು ಏನೇ ಅನ್ನು ಹೇಮಿಗೆ ತುಂಬಾ ಸಲಿಗೆ ಕೊಟ್ಟಿದ್ದಿಯಾ....ಒಬ್ಬಳೇ ಮಗಳು ಆಗಿರ್ಬಹುದು.. ಆದ್ರೆ ಅಷ್ಟೊಂದು ಮುದ್ದಿಸ್ಬಾರ್ದು.... ನೀನು ತಿಳಿದಿರೋದು, ಹೇಮಿ ಅಮಾಯಕಳು ಅಂತಾ. ನೀನು ಏನೇ ಹೇಳು....ಒಂದು ವಯಸ್ಸು ಅಂತ ಆದ್ಮೇಲೆ ಮನಸ್ಸು ಕಳ್ಳಾಟಕ್ಕೆ ಆರಂಭಿಸುತ್ತೆ....ಅವರ ರೀತಿ ನೀತಿಯೇ ಬೇರೆ ಆಗುತ್ತೆ....ನಾನು ಈಗ್ಲೂ ಹೇಳ್ತಾ ಇದ್ದೇನೆ ಮನೋಜ್ ಬಂದ ತಕ್ಷಣ ಅವನ ಕುತ್ತಿಗೆಗೆ ಕಟ್ಟಿದ್ರೆ ಸರಿ.....ಇಲ್ದಿದ್ರೆ"...:?.....?

"ಟಕ್" ಎಂದು ಫೋನ್ ಕುಕ್ಕಿ ಸೋಫಾದಲ್ಲಿ ಕುಸಿದರು. ಕಣ್ಣು ತುಂಬಿ ಬಂತು. ತಮ್ಮ ಒಡ ಹುಟ್ಟಿದವಳೂ ಹೇಮಳ ಬಗೆಗೆ ಶಂಕಿಸಬೇಕೆ.....? ಅಥವಾ ಒಂದು ವೇಳೆ ಅವಳ ಊಹೆಯೇ ಸರಿಯೇ....? ಪ್ರೀತಿ ತುಂಬಿದ ಕಣ್ಣಿಗೆ ಅವಳ ತಪ್ಪು ಒಪ್ಪಾಗಿದಿಯೇ–? ಏನಿದೆ ಅವಳ ತಪ್ಪು....? ನಡೆನುಡಿಯಲ್ಲಿ ಒಂದಿನಿತೂ ಬದಲಾಯಿಸಿಲ್ಲ....ಆದರೆ ತಂಗಿ ಅಂದಂತೆ ಮನ ಕಳ್ಳತನ ಮಾಡಲು ಆರಂಭಿಸಿರಬಹುದೆ.... ಅಂದರೆ ಅಶೋಕಾ....?....?

ತುಟಿ ಬಿಗಿದು ಧಡಧಡನೆ ಅವಳ ರೂಮಿ ಬಂದರು. ಅವಳ ಬೀರು ತೆಗೆದು ಪ್ರತಿ ಹಂತದಲ್ಲ ಕೈ ಹಾಕಿ ತಡಕಿದರು. ಉಹೂಂ....ಹಾಸಿಗೆ ಕೆಳ ದಿಂಬಿನಡಿ.....ಊಹೂಂ......ಮೈ ಬೆವರಿ ದಿಗ್ಭ್ರ ಯುಂಟಾಯ್ತು. ತನ್ನ ಕೆಟ್ಟ ಮನ, ತಮಗೆ ತಿಳಿ ತೆಂದು ಎಲ್ಲೋ ಮುಚ್ಚಿಟ್ಟಿದ್ದಾಳೆ........

ಸೆರಗನ್ನು ಮುಖದ ಮೇಲೆ ಬಲವಾಗಿ ಒ ಕಡೆಯದಾಗಿ ಡ್ರಾಯರ್ ಎಳೆದರು ಕಣ್ಣರಳಿತು. ಶ್ರ ಸಾರ್ಥಕವಾಯ್ತೆನಿಸಿದಾಗ, ನಿಟ್ಟುಸಿರುಗರೆದು, ಕ ರಟ್ಟಿನ ಡೈರಿಯನ್ನು ಕೈಗೆತ್ತಿಕೊಂಡು, ಸರಸರನೆ ಪು ತಿರುವಿ, ಆರೆಂಟು ದಿನಗಳ ಹಿಂದಿನಿಂದ ಓದಿದ ಶರೀರ ಕ್ರೋಧದಿಂದ ಕಂಪಿಸಿತು. "ಅಶೋಕ್ ನನ್ನ ತುಂಬ ಪ್ರೀತಿಸುತ್ತಾನೆ.... ದೇವರೇ ನನಗಾಗಿ ಅ ಜ್ವರವನ್ನು ಇಲ್ಲವಾಗಿಸು.... ಜ್ವರದ ತಾಪ ಅಡಗಿಸು. ವೈದ್ಯರು ಟೈಫಾಯಿಡ್ ಎಂದಿದ್ದಾರೆ. ನನಗೆ ಅ ಬಳಿ ಸದಾ ಕುಳಿತಿರುವ ಆಸೆ.... ಆದರೆ ಏ ಮಾಡಲಿ...." ?

ಮುಂದೆ ಪ್ರತಿ ದಿನವೂ ಅದೇ ಬರಹ. ಅಂ ಮೇಲೆ ಹೇಮಿಗೆ ಈಗ ಅಶೋಕನ ಬಳಿ ಕುಳಿತಿದ್ದಾ ಯಾರವ ಅಶೋಕಾ.... ?

ಡೈರಿಯನ್ನು ಇದ್ದ ಸ್ಥಳದಲ್ಲಿಯೇ ಇಟ್ ಧಡ ಧಡನೆ ಬೀದಿಗೆ ಬಂದು ನಿಂತರು.

ಬಲಮನೆಯಾಕೆ ನಿಂತಲ್ಲೇ ನಿಂತಿದ್ದವ ಆತುರದಿಂದ ಕೇಳಿದರು.

" ಹೇಮಾ ಇನ್ನೂ ಬರಲಿಲ್ವಾ ರಾಜಮ್ಮ....

" ಇಲ್ಲಮ್ಮಾ.... ಅದಕ್ಕೇ ಸ್ವಲ್ಪ ನಿ ರಾಜನ್ನ ಕಳಿಸ್ತೀರಾ, ಕಾಲೇಜ್ ಬಳಿ ಹೋಗ್ಬರಲಿ... ಇಷ್ಟು ಹೇಳುವುದರೊಳಗೆ ಕತ್ತು ಹಿಸುಕಿದ ಅನುಭ ತಮ್ಮ ಮಗಳು ಹಾದಿ ತಪ್ಪಿದ್ದಾಳೆ ಎಂದು ತಿಳಿ ಮೇಲೂ ವಹಿಸಿಕೊಳ್ಳುವ ಪ್ರೀತಿ....

ರಾಜ, ತಾಯಿಯಿಂದ ಕರೆ ಬರುವ ಮೊದ ಇವರ ಸಂಭಾಷಣೆ ಕೇಳಿ ಸೈಕಲ್ ಸಮೆ

ಬಂದವನೇ.... "ಮಾಮಿ, ನೀವು ಒಳಗೆ ಹೋಗಿ.... ಈಗ ಹೋಗಿಬರ್ತೀನೆ. ನನಗೇನೋ ಆಕೆ, ಅಶೋಕನ ಜೊತೆ ಇದ್ದಾರೆ ಅನಿಸುತ್ತೆ.... ಎಷ್ಟೋದಿನ ನಾನು ಕಂಡು ಬಂದಿದ್ದೇನೆ '.... ಎಂದವನೆ ಸರ್ರನೆ ಬೈಸಿಕಲ್ ತುಳಿದಾಗ.... ಪಕ್ಕದ ಮನೆಯಾಕೆಯೆದುರು ಭೂಮಿ ಕುಸಿಯಬಾರದೇ ಎನಿಸಿ, ಅಲ್ಲೇ ನಿಂತರೆ ಪ್ರಶ್ನೆಗಳ ಮಾಲೆ ಸುರಿದು, ಮನಸ್ಸನ್ನು ಕೆಡಿಸಬಹುದೆಂದು ಹೆದರಿ ಒಳಗೆ ಬಂದಾಗ ಕೂರಸಿಯಂತೆ ನೆಟ್ಟವು ಕಮಲಮ್ಮನ ನುಡಿಗಳು.

" ಕೇಳಿದ್ರಾ ಕಮಲಮ್ಮ.... ನಿಮ್ರಾಜ ನಿಮ್ಮ ನಿಮ್ಮ ಹತ್ತಿರವೇ ಈ ವಿಷಯ ಬಚ್ಚಿಟ್ಟಿದ್ದಾನಲ್ರೀ.... ರಾಜಮ್ಮ ಹೆಳ್ಕೋತಾರೆ, ಹೇಮಾ ಶುದ್ಧ ಅಪರಂಜಿ ಅಂತಾ.... ಆದ್ರೆ ಅದಿನಾಲ್ಕು ಕ್ಯಾರೆಟ್ ಕೂಡ ಇಲ್ವಲ್ರೀ. " ಯಾರ್ರಿ ಅಶೋಕ ಅಂದ್ರೆ....? ತಿಳ್ಕೊಳ್ಳಿ ದೊಡ್ಡೋರ ಗುಟ್ಟು ಇಷ್ಟೇ "....

ಕಿವಿ ಮುಚ್ಚಿ ಬಿಕ್ಕಿ ಬಿಕ್ಕಿ ಅತ್ತರು ತಾಯಿ. ತಮ್ಮ ಮಗಳ ಪ್ರೇಮ ಪ್ರಕರಣ ತನ್ನೊಬ್ಬರನ್ನು ಬಿಟ್ಟು ಎಲ್ಲೆಡೆಯು ಹಾಡಿ, ಹಾದಿ ಕತೆಯಾಗಿದೆ.... ಇಷ್ಟಕ್ಕೆಲ್ಲಾ ಕಾರಣ. ಅವಳ ಡ್ಯಾಡಿ.... ಮಗಳು ಕೇಳಿದ್ದಕ್ಕೆಲ್ಲಾ ಒಪ್ಪಿಗೆ ಮುದ್ರೆ ಇತ್ತು.... ಅವಳು ನಕ್ಕಿದ್ದೇ ಪರಮ ಸೌಭಾಗ್ಯವೆಂದು.... ಅವಳು ನಡೆದ ಹಾಡಿಯೇ ಸರಿಯೆಂದು ಉಚ್ಚಿಸಿ ಅವರೇ ಕೆಡಿಸಿರುವುದು.... ತಂಗಿ, ರಾಜ, ಕಮಲಮ್ಮ, ಕುಮುದಮ್ಮ, ಯಾಕೆ? ಇಡೀ ಊರಿಗೇ ಹೇಮಾ ಅಗ್ಗದ ವಿಷಯವಾಗಿದ್ದಾಳೆ.

ಒಳಗೆ ಕೂರಲಾರದೆ, ಹೊರಗೆ ನಿಂತಿರಲಾರದೆ ತತ್ತರಿಸುತ್ತಾ, ಪುನಃ ಬಾಗಿಲಿಗೆ ಬಂದರು. ಮೆಲ್ಲಗೆ ಅತ್ತಿತ್ತ ಕಣ್ಣಾಡಿಸಿದರು.... ಅಲ್ಲೇ ನಿಂತಿದ್ದಾರೆ ನಮ್ಮ ಹಿತೈಷಿಗಳು.... ಕೋಪ ಉಕ್ಕಿದರೂ, ತಡೆದು, ದೂರಕ್ಕೆ ಕಣ್ಣೋಡಿಸಿದರು....

ಎಲ್ಲರೂ ಮನೆ ಸೇರಲು ಬೇಗ ಬೇಗ ಓಡಿಯಾಡುತ್ತಿದ್ದಾರೆ.... ಮಳೆ ಬೀಳುವ ಸೂಚನೆಯಾಗಿ ತಂಗಾಳಿ ಮೈ ಕೊರೆಯುವಂತೆ ಆಡುತ್ತಿದೆ.... ಎಲ್ಲಿ ಹೋದಳು ಈ ಹುಡುಗಿ. ?

ಕಣ್ಣೊರಸಿಕೊಂಡರು....' ಕಣ್ಣರಳಿಸಿದರು .... ದೂರದ ಬೀದಿ ದೀಪದ ಕೆಳಗೆ, ಬಳುಕುತ್ತಾ ಸೋತ ನಡಗೆಯಲ್ಲಿ ಬರುತ್ತಿರುವ ಹುಡುಗಿ ಯಾರು.... ಯಾರು....

ನಿಟ್ಟುಸಿರು ಬಿಡುತ್ತಾ ಗೇಟಿನ ಹತ್ತಿರ ಬಂದ ೧ ಒಳಗಿನ ಗಡಿಯಾರ ನಿಷ್ಠುರುಣೆಯಿಂದ, ಎಂಟು ಬಾರಿಸಿದಾಗ, ಈ ಬಾರಿ ಕಳವಳ ಏರದೆ, ಕೋಪ ಉಕ್ಕೇರಿತು.

ಹೇಮಾ ಹತ್ತಿರ ಬಂದಳು.... ದಿಟ್ಟಿಸಿದರು ತಾಯಿ........ ಶರೀರ ಕೋಪದಿಂದ ಕಂಪಿಸುತ್ತಿತ್ತು.... ಹಾಗೆಯೇ ಎದುರು ನಿಂತವಳಲ್ಲೂ, ನಡುಗುತ್ತಿದೆಯೇನೋ ಶರೀರ, ಅನ್ನಿಸುತ್ತಿದೆ- ಕೂದಲು ಕೆದರಿದೆ ಕೆಂಪೇರಿ ಊದಿದ ಕಣ್ಣುಗಳು.... ಬಳಲಿದ ಮೋರೆ.... ಬಾಡಿದ ಹೂ ತುಟಿಗಳು.

ತಾಯಿಯನ್ನು ಕಂಡೊಡನೆ ಅಳಲು ಹತ್ತಿಕ್ಕಲು ಶಕ್ತಿಯಿಲ್ಲವಾಯ್ತು ಹೇಮಳಿಗೆ, ಕರವಸ್ತ್ರವನ್ನು ಬಾಯಿಗೆ ತುರುಕಿ ಬಿಕ್ಕಳಿಸಿದಾಗ ಭ್ರಮಿತರಾದರು ತಾಯಿ. ಕೆದರಿದ ಕೂದಲು ಊದಿದ ಕಣ್ಣು, ಇದರ ಅರ್ಥವೇನು? ಹೇಮಳ ಶಿಲವನ್ನು ದೋಚಿನ ಆ ಪಾಪಿ ಯಾರು....? ಪಾಪಿ ಅಶೋಕನೆ ಇರಬೇಕು........

ಹೇಮಾ ಮುಂದೆ ಬಂದು ತಾಯಿಯ ಭುಜದ ಮೇಲೆ ಮುಖವಿರಿಸಿ, ಬೀದಿಯೆಂಬುದನ್ನೂ ಮರೆತು ಬಿಕ್ಕಿ ಬಿಕ್ಕಿ ಅತ್ತಾಗ....ನೆರಮನೆಯವರು, ಅರ್ಥಗರ್ಭಿತವಾಗಿ ನೋಡಿ ತಲೆದೂಗಿದಾಗ, ತಾಯಿ ಸ್ಥೈರಣೆ ತಪ್ಪಿದರು.

" ಹೇಮಿ.... ಸಾಕೇನೇ ಗಂಟೆ....? ಅಳಲಿಕ್ಕೆ ಏನಾಯ್ತು...."?

" ಅಮ್ಮಾ.... ಅಮ್ಮಾ.... ಅಶೋಕ್ ಸತ್ತು ಹೋದ್ನಮ್ಮ.......ನನ್ನನ್ನು ಬಿಟ್ಟು ತುಂಬಾ ದೂರ ಹೋಗ್ಬಿಟ್ಟಾಮ್ಮಾ.... ಅವನ್ನ ಹ್ಯಾಗೆ ಮರೀಲಿ.... ಹ್ಯಾಗೆ ಮರೆತು ಬಿಡಲಿ.... "

ಮೈ ಮರಗಟ್ಟಿದಂತಾಯ್ತು ರಾಜಮ್ಮನವರಿಗೆ ಅಶೋಕ್ ಸತ್ತು ಹೋದ! ಒಂದೆಡೆ ನೆಮ್ಮದಿ.......

( 26 ನೇ ಪುಟ ನೋಡಿ )

# ಶ್ರೀ ಶರಣ ಬಸವೇಶ್ವರರು

—ವಸಂತಕುಷ್ಟಗಿ

[ಹಿಂದಿನ ಸಂಚಿಕೆಯಿಂದ]

ಚಿಂತಿಸಿದವರ ಚಿಂತಾಮಣಿಯಾಗಿ, ಕಲ್ಪಿಸಿದವರ ಕಲ್ಪವೃಕ್ಷವಾಗಿ, ಅಜ್ಞಾನಾಂಧರಿಗೆ ಜ್ಞಾನಚಕ್ಷು ದಿವಾಕರರಾಗಿ, ಸರಳ ಜೀವನ ನಡೆಸಿದ ಶರಣರ " ದ್ವಿತೀಯ ಬಸವೇಶ್ವರರು " ಹಾಗೂ " ದ್ವಿತೀಯ, ಶಂಭು " ಎಂದರೆ ತಪ್ಪಾಗದು,

(ಡ) ಕಲಬುರ್ಗಿಯ ಮಖ್ತಂಪುರದಲ್ಲಿ ಒಬ್ಬ ಶ್ರೀಮಂತ ಸ್ತ್ರೀಗೆ ಸಂತಾನವೇ ಇಲ್ಲದೆ ಬಳಲಿ ಬೆಂಡಾದಳು. ಶರಣರ ಮಹಿಮೆಗಳನ್ನು ಕೇಳಿ ಅವರ ಅನುಗ್ರಹವನ್ನು ಯಾಚಿಸಲು ಅಲಂಕಾರ ಮಾಡಿಕೊಂಡು ಅವರಲ್ಲಿಗೆ ಹೊರಟಳು. ದಾರಿಯಲ್ಲಿ ಒಬ್ಬ ಬಡವಿಯ ಮಗುವನ್ನು ನೋಡಿ ಅವಳು ಹೇಸಿದಳು. ಅದು ಶರಣರಿಗೆ ಅಪರೋಕ್ಷ ಜ್ಞಾನದಿಂದ ತಿಳಿಯಿತು. ಆದ್ದರಿಂದ ಆ ಶ್ರೀಮಂತ ಹೆಣ್ಣುಮಗಳಿಗೆ ಸಂತಾನಕರುಣೆಯು ಆಗಲಿಲ್ಲ. ಶರಣರಿಗೆ ಬೇಕಾದುದು ಸಂಪತ್ತಲ್ಲ ಹೃದಯ ಸಂಪತ್ತೆಂಬುದು ಈ ಘಟನೆಯಿಂದ ತಿಳಿಯುತ್ತದೆ.

(ಇ) ಜೇವರಗಿ ತಾಲ್ಲೂಕಿನ ಸಾತಖೇಟದಲ್ಲಿ ಜನರು ಶರಣರನ್ನು ಪರೀಕ್ಷಿಸಲು ಗಂಡಸಿಗೆ ಸ್ತ್ರೀ ವೇಷ ಹಾಕಿ ಸಂತಾನವನ್ನು ಕರುಣಿಸಲು ಶರಣರಿಗೆ ಮೊರೆಯಿಟ್ಟರು. ಆ ಪ್ರಕಾರ ವೇಶಧಾರಿಗೆ ಗರ್ಭವು ಬೆಳೆಯತೊಡಗಿತು. ಆ ವೇಶಧಾರಿಯ ತಂದೆ ತಾಯಿಗಳು ಗಾಬರಿಯಾಗಿ ಶರಣರಲ್ಲಿಗೆ ಮೊರೆಯಿಟ್ಟರು. ಆ ಹಿರಿಯರ ಆರ್ದ್ರತೆಗೆ ಮಾರುಹೋಗಿ ವೇಷಧಾರಿಯ ಗರ್ಭವನ್ನು ಇಳಿಸಿ ಅನುಗ್ರಹಿಸಿದರು. ಹೀಗೆ ಲೋಕದಲ್ಲಿ ಯಾವ ಸಾಧು ಸಂತರೊಡನೆಯೂ ಸರಸ ಸರಿಯಲ್ಲ; ಕುಪರೀಕ್ಷೆ, ಕುಹಕವೂ ಸರಿಯಲ್ಲ ಎಂಬುದನ್ನು ನಾರ್ಮಿಕವಾಗಿ ಅಂದು ತಿಳಿಸಿದ ವಿಷಯವು ಇಂದಿಗೂ ಅಚ್ಚಳಿಯದೆ ಈ ಪವಾಡ ಸಾರುತ್ತದೆ.

(ಈ) ಕಲಬುರಗಿಯ ಮಕ್ತಂಪುರದಲ್ಲಿ ಒಮ್ಮನದವರ ಮನೆತನದಲ್ಲಿ ವೃದ್ಧದಂಪತಿಗಳಿಗೆ ಮಕ್ಕಳನ್ನು ಪಡೆಯುವ ಅಪೇಕ್ಷೆಯಾಯಿತು ಅತ್ಯಂತ ನಿಷ್ಠೆಯಿಂದ ಶರಣರಲ್ಲಿಗೆ ಬಂದು ಅವರು ಮೊರೆಯಿಟ್ಟರು. ಮುಪ್ಪಿನಲ್ಲಿ ಮಕ್ಕಳನ್ನು ಕರುಣಿಸುವುದು ಹೇಗೆ ಎಂಬ ಧರ್ಮ ಸಂಕಟವು ಶರಣರನ್ನು ತೊಂದರೆಗೆ ಹಾಕಿತು. ಆವರೆ ಅವರು ಆಗ ಒಂದು ಚಮತ್ಕಾರವನ್ನು ಮೆರೆದು ಆ ವೃದ್ಧದಂಪತಿಗಳ ಮನಸ್ಸಿಗೆ ಸಮಾಧಾನವನ್ನು ಉಂಟು ಮಾಡಿದುದಲ್ಲದೆ, ತಮಗೆ ಕಲಬುರ್ಗಿಯಲ್ಲಿ ಆಶ್ರಮವನ್ನು ಪ್ರಪ್ರಥಮವಾಗಿ ನೀಡಿದ ಭಕ್ತರಾದ ದೊಡ್ಡಪ್ಪ ಗೌಡರ ಸಾಧನೆಯ ಹಿರಿಮೆಯನ್ನು ಬಹಿರಂಗಗೊಳಿಸಿದರು. ಅದು ಹೇಗೆ ಎಂದರೆ ಆ ವೃದ್ಧರಿಗೆ ದೊಡ್ಡಪ್ಪ ಗೌಡರ ಮಗುವನ್ನು ಉಡಿಯಲ್ಲಿ ಹಾಕಿ–ಶುಭವ ಕೋರಿದರು. ಇದರಿಂದ ದೊಡ್ಡಪ್ಪ ಗೌಡರಾಗಲೀ ನೀಲಮ್ಮನವರಾಗಲೀ ಕಿಂಚಿತ್ತೂ ಹಳಹಳಿಸಲಿಲ್ಲ. ಹೀಗೆ ಈ ಚಮತ್ಕಾರದಲ್ಲಿ ಇಬ್ಬರು ಶಿಷ್ಯರ ಘನತೆ ಗೌರವಗಳು ಅರಳಿರುವುದನ್ನು ಕಾಣಬಹುದು.

(ಉ) ಬಡವಿಯಾದ ಮುದುಕಿಯೋರ್ವಳು ಭಕ್ತಿಯಿಂದ ದಾಸೋಹಕ್ಕೆ ಒಂದು ಸಾವಿರ ಬೆರಣಿಗಳನ್ನು ಸಲ್ಲಿಸಿ ಮೊಮ್ಮಗನನ್ನು ಪಡೆದು ಧನ್ಯಳಾದ ಘಟನೆಯು ಶರಣರು ಎಂತಹರಿಗೂ ದಯೆಯ ಗಂಗೆಯಿಂದ ಪುನೀತಗೊಳಿಸ ಬಲ್ಲರೆಂಬ ಮಾತನ್ನು ಬಿಂಬಿಸುತ್ತದೆ.

(ಲ) ಶರಣರ ದಯಾಳು ಹೃದಯವನ್ನು ನಂಬಿ ನಾನಾತರಹದ ತಮ್ಮ ಸಮಸ್ಯೆಗಳಿಗೆ ಪರಿಹಾರವನ್ನು ಕಂಡು ಭಕ್ತರು ಧನ್ಯರಾಗಿದ್ದಾರೆ. ಆ ಪ್ರಕಾರ ಒಬ್ಬ

ಬಡವನಿಗೆ ತನ್ನ ಮಗನ ಮದುವೆಗೆ ಹಣ ಬೇಕಾಗಿತ್ತು. ಸರಳವಾಗಿ ಶರಣರ ಹತ್ತಿರ ಬಂದು ಮೊರೆಯಿಟ್ಟನು. ಪಾಪ ಶರಣರಲ್ಲಿ ಆ ಕ್ಷಣ ಹಣ ಎಲ್ಲಿಂದ ಬರಬೇಕು. ಆಗ ಅವರು ಅವನನ್ನು ಒಂದು ಹುತ್ತದ ಬಳಿ ಕರೆದು ಕೊಂಡು ಹೋಗಿ ಅಲ್ಲಿ ಹೆಡೆಯೆತ್ತಿ ಆನಂದದಿಂದ ಆಡುತ್ತಿದ್ದ ಹಾವನ್ನು ಹಿಡಿದುಕೊಳ್ಳಲು ಅವನಿಗೆ ಹೇಳಿದರು ಅವನು ಗಾಬರಿಯಾಗಿ ನಿಂತನು. ಅಷ್ಟರಲ್ಲಿ ಆ ಹಾವು ಸಳ ಸಳನೆ ಹುತ್ತದಲ್ಲಿ ಸೇರತೊಡಗಿತು. ಬಾಲವಷ್ಟೇ ಉಳಿಯಿತು, ಅದನ್ನಾದರೂ ಗಟ್ಟಿಯಾಗಿ ಹಿಡಿಯಲು ಒತ್ತಾಯದಿಂದ ಶರಣರು ಹೇಳಿದಾಗ ಆ ಬಡವ ಅದನ್ನು ಹಿಡಿದನು. ಆತನು ಹಿಡಿದ ಆ ಹಾವಿನ ಬಾಲವು ಬಂಗಾರವಾಗಿ ಪರಿವರ್ತಿತವಾಯಿತು. ಆಗ ಆ ಬಡವನು ತಾನೇಕೆ ಇಡೀ ಹಾವನ್ನು ಹಿಡಿಯಲಿಲ್ಲವೆಂದು ಪಶ್ಚಾತ್ತಾಪಪಟ್ಟನು. ಹೀಗೆ ಪಾಲಿಗೆ ಬಂದದ್ದು ಪಂಚಾಮೃತ ಹಾಗೂ ಶರಣರ ವಾಣಿಯನ್ನು ನಂಬಿ ಸಂಪೂರ್ಣವಾಗಿ ಅದನ್ನು ಉಪಯೋಗಿಸಿಕೊಳ್ಳಬೇಕೆಂಬ ಮಾತುಗಳು ಈ ಘಟನೆಯಿಂದ ದಾರಿದೀಪವಾಗಿ ಬರುತ್ತವೆ.

(೯) ಒಬ್ಬ ಗೃಹಸ್ಥನ ಮಡದಿಯು ಅಪೂರ್ವ ಸುಂದರಿಯಾಗಿದ್ದಳು. ಆ ಗೃಹಸ್ಥನು ತಾನು ಮನೆಯಲ್ಲಿ ಇಲ್ಲದಾಗ ಅವಳನ್ನು ಯಾರಾದರೂ ಮೋಹಿಸಿಬಿಟ್ಟರೆ ಏನು ಗತಿಯೆಂದು ಅವಳ ಮೂಗನ್ನೇ ಕೊಯ್ದು ಬಿಡಬೇಕೆಂದು ಯೋಚಿಸಿದನು. ಇದನ್ನು ತಿಳಿದ ಆ ಸುಂದರಿಯು ಹೆದರಿ ಶರಣರಲ್ಲಿಗೆ ಬಂದು ಅಭಯ ಭಿಕ್ಷೆ ಬೇಡಿದಳು ಶರಣರು ಅವಳನ್ನು ಗಂಡಾಂತರದಿಂದ ಪಾರುಮಾಡಿ ಆಕೆಯ ಗಂಡನಿಗೆ ಬುದ್ಧಿಕಲಿಸಿ ಅವರ ಸಂಸಾರದಲ್ಲಿ ರಸಮಯ ವಾತಾವರಣವನ್ನು ನಿರ್ಮಿಸಿ ನಂಬಿದವರಿಗೆ ಇಂಬುಗೈದರು.

(೧೦) ಶರಣರು ಪರಧರ್ಮಗಳನ್ನು ಗೌರವದಿಂದ ಕಾಣುತ್ತಿದ್ದರು ಅವರ ದೃಷ್ಟಿಯಲ್ಲಿ ಎಲ್ಲ ಧರ್ಮದ ಶರಣರೂ ದೇವರ ಮಕ್ಕಳೇ ಎಂಬ ಭಾವನೆಯು ತುಂಬಿ ತುಳುಕುತ್ತಿತ್ತು. ಕಲಬುರಗಿಯಲ್ಲಿರುವ ಬಂದೇ ನವಾಜರ ಗೂಡಿಯ ಬಳಿಗೆ ಹಿಂದೆ ಜೇರಿಯವರನ್ನು ಬಿಡುತ್ತಿರಲಿಲ್ಲವೆಂದು ಕಾಣುತ್ತದೆ. ಒಂದು ಸಲ ಶರಣ ಬಸವೇಶ್ವರರೂ ಆ ಪುಣ್ಯಸ್ಥಳಕ್ಕೆ ಹೋಗುವ ಪ್ರಸಂಗ ಬಂದಿತ್ತು. ಆದರೆ ಸಮಾಧಿಯ ಬಳಿಗೆ ಶರಣರನ್ನು ಬಿಡಲಿಲ್ಲ. ಆಗ ಶರಣರು ದೈವಾನುಗ್ರಹ ಪ್ರೇರಿತರಾಗಿ ಸೂಕ್ಷ್ಮಶರೀರಗಳಾಗಿ ಆ ಪುಣ್ಯಜೀವಿಯ ಸಮಾಧಿಯ ಬಳಿ ಸುಳಿದು, ಆ ಮುಸಲ್ಮಾನ ಭಕ್ತರು, ಆ ಸಮಾಧಿಗೆ ಗಂಧ ಹಚ್ಚುವಾಗ ಬಿಟ್ಟಿದ್ದ ಸಂದುಗಳನ್ನು ತೋರಿಸಿ ಚಕಿತಗೊಳಿಸಿದರು. ಅಷ್ಟೇ ಅಲ್ಲ ಅಲ್ಲಾನ ದೃಷ್ಟಿಯಲ್ಲಿ ಎಲ್ಲ ಜನರೂ ಒಂದೇ ಎಂಬ ಭಾವನೆಗೆ ಬೆಳಕನ್ನು ನೀಡಿ ಮಾನವ ಧರ್ಮವನ್ನು ಘೋಷಿಸಿದರು. ಅಂದಿನಿಂದ ಬಹಳಷ್ಟು ಜನರು ಹಿಂದೂ–ಮುಸಲ್ಮಾನರು ಪರಮಾತ್ಮನ ಎರಡು ಕಣ್ಣುಗಳೆಂಬ ಭಾವನೆಯಿಂದ ನಡೆದುಕೊಳ್ಳುತ್ತಿದ್ದಾರೆ. ಇದೆಲ್ಲ ಶರಣರ ಕೃಪೆ ನವಾಜರ ಅನುಕಂಪ.

ಹೀಗೆ ಶರಣ ಬಸವೇಶ್ವರರು ತಮ್ಮ ಸಾಧನೆಯ ಮಹಿಮೆಗಳನ್ನು ದೀನದಲಿತರ ಉದ್ಧಾರಕಾಗಿ, ಶಿಷ್ಯರ ಪರಿಪಾಲನೆಗಾಗಿ, ಯೋಗ್ಯ ರೀತಿಯಿಂದ ಬಳಸಿ ಮಾನವತೆಯ ಶ್ರೀ ಸೌಧವನ್ನು ಕಟ್ಟಿದರು. ಈ ರೀತಿಯಾಗಿ ಅನುಗ್ರಹಕ್ಕೆ ಪಾತ್ರರಾದ ಭಕ್ತಾದಿಗಳು ಅನನ್ಯಭಾವದಿಂದ ತಂದು ಸಲ್ಲಿಸಿದ ಕಾಣ್ಕೆಗಳನ್ನು ದಾಸೋಹಕ್ಕೆ ನೀಡಿ, ಕೆರೆಯ ನೀರನ್ನು ಕೆರೆಗೆ ಚೆಲ್ಲಿ ವಿಶಾಲ ಹೃದಯವನ್ನು ಮೆರೆದು ಅಂತಃ ಕರುಣೆಯ ಕಡಲನ್ನು ನಿರ್ಮಿಸಿದರು. ಈ ಅಂಶಗಳನ್ನೆಲ್ಲಾ ಗಮನಿಸಿದರೆ ಶ್ರೀ ಸಿದ್ಧಯ್ಯ ಪುರಾಣಿಕರು ಹೇಳಿದಂತೆ, ಈ ಶರಣರು "ದ್ವಿತೀಯ ಶಂಭು" ಹಾಗೂ "ದ್ವಿತೀಯ ಬಸವೇಶ್ವರರು" ಅಷ್ಟೇ ಅಲ್ಲ ಕಲ್ಯಾಣವನ್ನು ಕಲಬುರಗಿಗೆ ಬರಮಾಡಿಕೊಂಡು ತ್ರಿವಿಧ ದಾಸೋಹಮೂರ್ತಿ ಎಂಬುದನ್ನು ನಾವು ಸ್ಮರಿಸಿಕೊಳ್ಳಬೇಕು.

ಈ ಸರಳ ಜೀವನದ ಮಹಾಮಹಿಮರು, ಸರ್ವ ಧರ್ಮಗಳಲ್ಲಿ ಗೌರವವನ್ನು ಸಹಿಷ್ಣುತೆಯನ್ನೂ ತಾಳಿ, ಯಾರೊಬ್ಬರ ಭಕ್ತಿ ವಿಶ್ವಾಸಗಳನ್ನು ಭಂಗಗೊಳಿಸದೆ, ಅವರವರ ಅಪೇಕ್ಷೆಯಂತೆ ಅವರವರ ಇಷ್ಟಾರ್ಥಗಳನ್ನು ಈಡೇರಿಸಿ ಅನುಕಂಪದ ವಿಶಾಲ ಹೃದಯವನ್ನು ಸುಮಾರು ೭೭ ವರ್ಷಗಳವರೆಗೆ ಇಹಲೋಕದಲ್ಲಿ ಶರೀರಧಾರಿಗಳಾಗಿ ಮೆರೆದು ಸಿದ್ಧ ಬುದ್ಧರಾದರು. ಚಿಂತಿಸಿದವರ ಚಿಂತಾಮಣಿಯಾಗಿ, ಕಲ್ಪಿಸಿದವರ ಕಲ್ಪವೃಕ್ಷವಾಗಿ,

( 25 ನೇ ಪುಟ ನೋಡಿ )

# ವಿಜ್ಞಾನ ಮತ್ತು ಕಲೆ

—ಪ್ರೊ। ಎಂ. ಎಸ್. ಎಸ್. ರಾವ್.

> ವಿಜ್ಞಾನ ಮತ್ತು ಕಲೆ ಇವು ಒಂದಕ್ಕೊಂದು ಪೂರಕಗಳು ವಿಜ್ಞಾನಾಸಕ್ತ ಮನಸ್ಸು ಮತ್ತು ಕಲಾಸಕ್ತ ಹೃದಯ ಇವೆರಡೂ ಒಂದೇ ವ್ಯಕ್ತಿಯ ಸೊತ್ತಾದರೆ ಆಗ ಪರಿಣಾಮ ರಂಜನೀಯ.

ವಿಜ್ಞಾನ ಮತ್ತು ಕಲೆ ಎಂಬುವು ಸಾಹಿತ್ಯದಲ್ಲಿ ದೂರ ನಿಲ್ಲುವುವು. ಅವುಗಳ ನಡುವಿನ ಅಂತರವು ಬಹು ಹೆಚ್ಚು. ಒಂದೊಂದೂ ಒಂದು ದೊಡ್ಡ ಕ್ಷೇತ್ರವನ್ನಾವರಿಸಿವೆ. ಕೆಲವು ವಿಚಾರವಾದಿಗಳು ಮಾತ್ರ ಈ ವಿಜ್ಞಾನ ಮತ್ತು ಕಲೆಗಳ ಬಗ್ಗೆ ಇರುವ ಸಂಬಂಧಗಳನ್ನು ದೀರ್ಘವಾಗಿ ಆಲೋಚಿಸಿದ್ದಾರೆ. ಉದಾಹರಣೆಗೆ ಮೊದಲು ವಿಜ್ಞಾನಿಯಾಗಿದ್ದು, ನಂತರ ಸಾಹಿತಿಯಾದ 'ಸಿ ಪಿ. ಸ್ನೋ.' ಎಂಬಾತನು ಎರಡು ಪರ್ವತಪ್ರಾಯದ ಸಂಸ್ಕೃತಿಗಳನ್ನು ಗುರುತಿಸಿದ್ದಾನೆ. ಒಂದು ವಿಜ್ಞಾನ ಮತ್ತು ತಂತ್ರಜ್ಞಾನ: ಎರಡು ಕಲೆ. ಆತನ ಅಭಿಪ್ರಾಯದಲ್ಲಿ ಇವೆರಡೂ ಸಂಧಿಸಲಾರದಷ್ಟು ದೂರ ದೂರ ಇವೆ. ಈ ಎರಡೂ ಕ್ಷೇತ್ರ ಅಥವಾ ತುದಿಗಳನ್ನು ಜೋಡಿಸುವ ಪ್ರಯತ್ನ ನಿಷ್ಪ್ರಯೋಜಕ ಎಂದೂ ಕೆಲವರು ಭಾವಿಸುವುದುಂಟು ವೀಸ್‌ಪಾಲ್‌ನಂತಹ ಕೆಲವರು ಇದಕ್ಕೆ ತದ್ವಿರುದ್ಧವಾದ ಅಭಿಪ್ರಾಯ ತಾಳುತ್ತಾರೆ ವಿಜ್ಞಾನ ಮತ್ತು ಕಲೆ ಎಂಬ ಎರಡು ಜ್ಞಾನ ಶಾಖೆಗೆ ಒಂದೇ ಮೂಲ ಆಧಾರ, ತಳಹದಿ ಇವೆ ಎನ್ನುತ್ತಾರೆ ಅವರು. ಇನ್ನು ಕೆಲವರು ವಿವಿಧಬಗೆಯ ಅಭಿಪ್ರಾಯಗಳನ್ನು ತಾಳಿ, ವಿಜ್ಞಾನ ಮತ್ತು ಕಲೆಗಳ ಬಗ್ಗೆ ಅಷ್ಟಿಷ್ಟು ವಿವರಣೆ ವ್ಯಾಖ್ಯಾನಗಳನ್ನು ಕೊಡುತ್ತಾರೆ. ಒಟ್ಟಿನಲ್ಲಿ ವಿಜ್ಞಾನ ಮತ್ತು ಕಲೆ ಎಂಬುವು ತೀರ ಬಿನ್ನ ಮತ್ತು ಸ್ವತಂತ್ರ ಎಂಬ ಭಾವನೆಯೇ ಅನೇಕರಲ್ಲಿದೆ.

ಸಾಮಾನ್ಯವಾಗಿ ಈ ಜಗತ್ತಿನಲ್ಲಿ ಎಲ್ಲವೂ ಒಂದು ಅಪೂರ್ವ ಸೃಷ್ಟಿ ಎಂದು ವಿಜ್ಞಾನ ಸಾರುತ್ತದೆ. ಆದ್ದರಿಂದ ವಿಜ್ಞಾನ ಮತ್ತು ಕಲೆಯೂ ಅದೇರೀತಿ ಇದ್ದಲ್ಲಿ ಆಶ್ಚರ್ಯವೇನಿಲ್ಲ. ಆದರೆ ವಿಜ್ಞಾನ ಮತ್ತು ಕಲೆ ಯಾವ ರೀತಿಯಲ್ಲಿ ಅಪೂರ್ವವಾಗಿವೆ ಅವು ಯಾವ ರೀತಿಯಲ್ಲಿ ಪರಸ್ಪರ ಸಂಬಂಧಿಸಿವೆ ಎಂಬುದು ಒಂದು ಸಮಸ್ಯೆಯೇ. ವಿಜ್ಞಾನ ಮತ್ತು ಕಲೆ ಎಂಬುವೇನೋ ಬಹು ದಿವ್ಯ ಪರಿಶುದ್ಧ ಕ್ಷೇತ್ರಗಳೇ. ಆದರೆ ಸಮಸ್ಯೆ ಇರುವುದು ಆಯಾ ಕ್ಷೇತ್ರಗಳ ನಿಷ್ಣಾತ-ಪರಿಣತರಲ್ಲಿ. ಯಾವುದೇ ಒಂದು ಕಲ್ಪನೆ ಅಥವ ಆಧಾರವು ವಿಜ್ಞಾನಿಯ ಗೋಚರಕ್ಕೆ ಬಂದುದಾದರೆ, ಅವನು ಮೊದಲು ಅವು ನಿಸರ್ಗ ಪರಿಸರ, ಇಲ್ಲವೇ ಸಸ್ಯ-ಪ್ರಾಣಿ-ಮಾನವ ಜೀವಿಗಳಲ್ಲಿ ಯಾವ ಆಕಾರ ಪ್ರಮಾಣದಲ್ಲಿವೆ, ಎಂದು ನಿರ್ಧರಿಸಲು ತವಕಪಡುತ್ತಾನೆ. ಆದರೆ ಕಲ್ಪನೆ ಅಥವಾ ಊಹೆ ಅಥವಾ ಭಾವನೆ ಎಂಬುದಕ್ಕೆ ಯಾವ ನಿರ್ದಿಷ್ಟ ಪ್ರಮಾಣ ಅಥವಾ ಅಳತೆಗೋಲು ಇಲ್ಲ. ಅದೇ ಒಂದು ಪ್ರತ್ಯೇಕ ನಿಮಾರಹಿತ ಜಗತ್ತು, ಎಂಬುದನ್ನು ಅರಿತುಕೊಳ್ಳಬೇಕಾದೀತು. ಒಬ್ಬ ಕಲಾಕಾರನ ದೃಷ್ಟಿಯಲ್ಲಿ ವಿಜ್ಞಾನಿಯು ಕೆಲಸವಿಲ್ಲದ ಕುಂಬಾರನಂತೆ ಪ್ರಯೋಗ ನಳಿಕಗಳೊ-ದಿಗೆ ಪ್ರಯೋಗಾಲಯಗಳಲ್ಲಿ ವಿಹರಿಸುತ್ತ ಏನೂ ಕೆಲಸಕ್ಕೆಬಾರದ ವಿಷಯಗಳ ಮೇಲೆ ತನ್ನ ಶಕ್ತಿ ಹ್ರಾಸಮಾಡಿಕೊಳ್ಳುತ್ತಿರುತ್ತಾನೆ. ಮೇಲಾಗಿ ಕಲಾಕಾರನ ದೃಷ್ಟಿಯಲ್ಲಿ, ವಿಜ್ಞಾನದ ಬಗ್ಗೆ ವ್ಯಯಮಾಡಿದ ಶಕ್ತಿ, ಧನ, ವೇಳೆಗಳ ಪೈಕಿ ಕೆಲವಷ್ಟೇ ದಿನ ನಿತ್ಯದ ಬಳಕೆಗೆ ಉಪಯುಕ್ತವೆನಿಸುವುವು. ಆದರೆ ವಿಜ್ಞಾನಕ್ಕಾಗಿ ಖರ್ಚುಮಾಡುವುದು ಮಾತ್ರ ಅಪಾರವೆನಿಸುತ್ತದೆ ಆರ್ಥಿಕದೃಷ್ಟಿಯಿಂದ ನೋಡಲಾಗಿ ವಿಜ್ಞಾನಿಯು ಸಮಾಜಕ್ಕೆ ಒಬ್ಬ ಹೊರೆಯೇ ಹೊರತು ಬೇರೇನಿಲ್ಲ. ಎಂಬುದು ಕಲಾಕಾರನ ವಾದ. ಇದಕ್ಕೆ ವ್ಯತಿರಿಕ್ತವಾಗಿ ಕಲೆ ಎಂಬುದು ಒಂದು ನಿಶ್ಚಿತ ಉದ್ದೇಶರಹಿತ ಸಾಧನೆ ಎಂತಲೂ, ಮತ್ತು ಅದರಿಂದ ಬರುವ ಲಾಭ ಅಷ್ಟೇನೂ

ಮಹತ್ವದ್ದಲ್ಲ ಎಂಬುದು ಒಪ್ಪೊನ್ಪ್ನ ವಿಜ್ಞಾನಿಯ ವಾದವೂ ಆಗಿರುತ್ತದೆ.

ವಿಜ್ಞಾನ ಮತ್ತು ಕಲೆ ಎಂಬುವು ತೋರಿಕೆಗೆ 2 ಎರಡುಪ್ರತ್ಯೇಕ ರಾಜಪಥಗಳಂತಿದ್ದು, ಒಂದೇ ಗುರಿಯತ್ತ ಸಾಗುತ್ತವೆ ಎಂಬುವನ್ನು ಮರೆಯುವಂತಿಲ್ಲ. ಹಾಗೆ ನೋಡಿದರೆ ಈ ಸಾಧನವು ತೋರಿಕೆಗೆ ಬಿನ್ನನಾಗಿ ಕಂಡು ಬಂದರೂ, ಅವು ಒಂದೇ ಬಗೆಯ ಘಟಕಗಳಿಂದಾಗಿದ್ದು ವಿವಿಧಪ್ರಮಾಣದಲ್ಲಿ ಮಿಶ್ರಣವಾದಂತೆ ತೋರುತ್ತವೆ. ಅವುಗಳಲ್ಲಿರುವ ಸಾಮ್ಯ ವೈಷಮ್ಯಗಳೆಲ್ಲವೂ ಸಹಾ ನಾಂತರವಾಗಿ ಸಾಗುವಂತೆ ಕಂಡುಬಂದರೂ, ಅವುಗಳ ಆದಿ ಅಂತ್ಯ ಒಂದೇ ಆಗಿರುವುದುಂಟು. ಅವು ಅಸಹ ಜತೆಯಲ್ಲಿ ಸಹಜವಾಗಿರುವಂತೆಯೂ ಇರುವುದುಂಟು. ಅವುಗಳ ಕಂಪನಗಳಲ್ಲಿ ಭಿನ್ನತೆ ಕಂಡುಬರಬಹುದು. ಅವು ಒಂದೇ ಬಗೆಯ ತರಂಗಗಳನ್ನು ಹೊಂದಿದ್ದರೂ ಅವುಗಳ ತರಂಗಮಾನಗಳಲ್ಲಿ ವ್ಯತ್ಯಯ ಇರಬಹುದು ಹೀಗಾಗಿ ಅವೆರಡೂ ಒಂದು ದಿವ್ಯ ಉದ್ದೇಶಕ್ಕಾಗಿಯೇ ಸಮಸಮನಾಗಿ ಸಾಗಬೇಕು. ಕ್ರಿಯೆ ಮತ್ತು ಸದುದ್ದೇಶದ ಆಲೋಚನೆಗಳು ಕೂಡಿಬಂದಾಗಲೇ ಒಂದು ಸಾಧನೆ ಪರಿಪೂರ್ಣವಾಗುತ್ತದೆ. ಕನಸು ನನಸಾಗುತ್ತದೆ.

ಹಸ್ತ ಸಾಮುದ್ರಿಕಾಶಾಸ್ತ್ರದಲ್ಲಿ ಹಸ್ತ ರೇಖಾ ವಿಜ್ಞಾನ ಮತ್ತು ಸಾಮುದ್ರಿಕೆಗಳೆರಡೂ ಕೂಡಿದರೇನೇ ಅದೊಂದು ಸಹಜ ಮತ್ತು ಸ್ಪಷ್ಟವಾದ ಹಸ್ತಪರಿಶೀಲನೆ ಯಾಗಬಲ್ಲದು. ಅಂತೆಯೇ ಒಂದು ಬಣ್ಣದ ಪೆಟ್ಟಿಗೆ ಅಥವಾ ಡಬ್ಬಿಯಿಂದ ಹೃದಯದ ಭಾವನೆ, ಶೀಘ್ರ ವೇದಿತ ಮತ್ತು ಮಾನಸಿಕ ಕಲ್ಪನೆ ತುಮುಲಗಳನ್ನು ಒಂದು ಹಾಳೆ ಅಥವಾ ವಸ್ತುವಿನ ಮೇಲೆ ಬರೆದು ತುಂಬಿದರೆ ಒಂದು ಕಲಾತ್ಮಕ ಸೃಷ್ಟಿ ನಿರ್ಮಾಣ ವಾಗುತ್ತದೆ. ಅದೇ ಬಣ್ಣದ ಪೆಟ್ಟಿಗೆಗೆ ವಿಚಾರ ಶಕ್ತಿ ವಿಶ್ಲೇಷಣೆ, ಪ್ರಾಯೋಗಿಕತೆ ಮುಂತಾದವುಗಳನ್ನು ಬೆರೆಸಿ ತುಂಬಿದರೆ ಆಗ ಒಂದು ವೈಜ್ಞಾನಿಕ ಛಾಯೆಯುಳ್ಳ ಸಾಧನೆ ಪೂರ್ಣಗೊಳ್ಳುತ್ತದೆ. ಈ ಬಣ್ಣದ ಪೆಟ್ಟಿಗೆಯಲ್ಲಿ ಪ್ರೇಮ, ಶ್ರದ್ಧೆ, ನಿಷ್ಠೆ, ಸಮರ್ಪಣೆ ಮುಂತಾದ ವಿವಿಧ ರಾಗ ಭಾವ ದ ಬಣ್ಣಗಳಿರುತ್ತವೆ ಎಂದು ಭಾವಿಸಬಹುದು. ವಿಜ್ಞಾನಿಯ ಮನಸ್ಸಿನಲ್ಲಿ ನಿಸರ್ಗ ಸೌಂದರ್ಯ ರಹಸ್ಯ ಮೆಚ್ಚಿಗೆ, ಕುತೂಹಲ, ಮುಂತಾದುವು ಹುದುಗಿದ್ದು ಹೃದಯದಲ್ಲಿ ವಿಷಯಗಳನ್ನು ಯಾವುದೇ ಪೂರ್ವಗ್ರಹ ದೋಷ ವಿಕಾರಗಳಿಲ್ಲದೇ ಮೆಚ್ಚುವ ಪರಿಶುದ್ಧತೆ ಇರುತ್ತದೆ. ಕಲೆಗಾರನಲ್ಲಿ ಹೃದಯವು ಸೌಂದರ್ಯವಂತಿಕೆಯಿಂದ ತುಂಬಿದ್ದು ಅದರ ಜೊತೆಗೆ ಅವನ ಅಪಾರ ಕಲ್ಪನಾ ಅಥವಾ ಭಾವನಾ ಸಾಮರ್ಥ್ಯವೂ ತುಂಬಿ ತುಳುಕಾಡುತ್ತಿರುತ್ತದೆ. ಹೀಗಾಗಿ ಅವನು ತನ್ನದೇ ಆದ ಒಂದು ನಿರ್ದಿಷ್ಟ ಕಲ್ಪನಾ ಸಾಮ್ರಾಜ್ಯದಲ್ಲಿ ಮುಳುಗಿರುತ್ತಾನೆ, ಈ ರೀತಿ ವಿಜ್ಞಾನಿ ಮತ್ತು ಕಲೆಗಾರ ಎಂಬ ಇಬ್ಬರು ಮೇಧಾವಿಗಳು ಪರಿಸರ ಸಂಬಂಧವುಳ್ಳ ದಿಶೆ–ದಿಕ್ಕುಗಳಲ್ಲಿ ವ್ಯವಸ್ಥಿತರೀತಿ ಕಾರ್ಯ ಮಾಡುತ್ತಾರೆ.

ಇಂತಹ ಇನ್ನೂ ಅನೇಕ ನಿದರ್ಶನಗಳನ್ನು ಪಟ್ಟಿಮಾಡಬಹುದು. ಇದನ್ನು ಅರ್ಥಮಾಡಿಕೊಳ್ಳಲು ಚಿಕಿತ್ಸಕ ಬುದ್ಧಿ–ಮನಸ್ಸು ಮಾತ್ರ ಬೇಕಷ್ಟೇ ! ಉದಾಹರಣೆ ಸಸ್ಯಗಳಲ್ಲಿ ನಾಳಮಯ ಕೋಶಗಳೆನಿಸಿದ "ಕ್ಸೈಲಮ್" ಮತ್ತು ಸೆಕೆಂಡರಿ ವುಡ್‌ಗಳನ್ನು ಆಧುನಿಕ ಕಲೆಯ ಶ್ರೇಷ್ಠ ಚಿತ್ರ–ಡಿಸೈನ್‌ಗಳಾಗಿ ರೂಪಿಸಿಕೊಳ್ಳಬಹುದು ಜೀವಕೋಶ ಶಾಸ್ತ್ರಜ್ಞನು ತಾನು ಸೂಕ್ಷ್ಮದರ್ಶಕದಲ್ಲಿ ಕಾಣುವ ಹಲವಾರು ಸುಂದರ ರೇಖಾಕೃತಿಗಳನ್ನು ಫೋಟೋಗ್ರಫಿಯಿಂದ ಸೆರೆಯಿಡಿಯಬಹುದು. ಇವು ಅವನನ್ನು ಶ್ರೇಷ್ಠ ವಿಜ್ಞಾನಿಯಷ್ಟೇ ಅಲ್ಲದೆ ಉತ್ತಮ ಕಲಾಕಾರನನ್ನಾಗಿಯೂ ಮಾಡಬಲ್ಲದು. ಆದ್ದರಿಂದ ತನ್ನ ನಿಶ್ಚಿತ ಗುರಿಯನ್ನೂ ಮುಟ್ಟಿದಂತಾಗುತ್ತದೆ. ಅಂತೆಯೇ ಅನೇಕ ಸೂಕ್ಷ್ಮಜೀವಿಗಳೂ ಕೂಡ ಕಲಾಕಾರನಿಗೆ ಉತ್ತಮ ಚಿತ್ರಗಳನ್ನೂ ಒದಗಿಸಬಲ್ಲವು. ಅದೇ ರೀತಿ ಪುಷ್ಪಗಳು ಮತ್ತು ಪಕ್ಷಿಪ್ರಾಣಿಗಳು ಕೂಡ ನಿಸರ್ಗದಲ್ಲಿ ಬೆಳೆಯುವ ಸಸ್ಯಜೀವಿಗಳು, ವನ್ಯಪ್ರಾಣಿಗಳು ಮತ್ತು ಕೀಟಗಳು ಸಹಾ ಕಲಾದೃಷ್ಟಿಯಿಂದ ಶ್ರೇಷ್ಠ ದರ್ಜೆಯ ಸೃಷ್ಟಿಗಳಾಗಿರುತ್ತವೆ ಈ ಎಲ್ಲ ಜೀವಿಗಳಲ್ಲಿ ಒಂದು ವಿಶೇಷ ಕಲಾತ್ಮಕ ಆಕರ್ಷಣೆ ಉಂಟು ವೈಜ್ಞಾನಿಕ ಸಂಶೋಧನೆಯೆಂದರೆ D. N. A. ಎಂಬ ಅಣುವಿನ ರಚನೆ ಎನ್ನಬಹುದು.

"ವ್ಯಾಟ್‌ಸನ್" ಮತ್ತು "ಕ್ರಿಕ್" ಎಂಬುವರು ಇದನ್ನು ಗುರುತಿಸಿದ್ದು ಕೇವಲ ಪ್ರಯೋಗಗ

ಳಿಂದಷ್ಟೇ ಅಲ್ಲ; ಅವರಲ್ಲಿ ಅತ್ಯಧಿಕ ಊಹಾಪೋಹಗಳೂ ಕಲ್ಪನೆಗಳೂ ಸೇರಿಕೊಂಡವು. ಇವೆರಡರಿಂದ ಅವರು D. N. A. ಎಂಬ ಅಣುವಿನ ಸಮಸ್ಯೆಯನ್ನು ಬಿಡಿಸುವಲ್ಲಿ ಯಶಸ್ವಿಯಾಗಿ, ನೋಬೆಲ್ ಪಾರಿತೋಷಕಗಳಿಸಿದರು. ಅವರ ಸಮಕಾಲೀನರೇ ಆದ "ವಿಲ್ಕಿನ್ಸ್", "ಫ್ರಾಂಕ್ಲಿನ್", "ಚಾರ್ಜಾವ್" ಮತ್ತಿತರರು ಅದೇ ಕಾಲಕ್ಕೆ ಇದನ್ನು ಸಾಧಿಸಲಾರದೇ ಹೋದರು. ಏಕೆಂದರೆ ಅವರ ಪ್ರಯೋಗಗಳ ಜೊತೆಗೆ ಸಾಕಷ್ಟು ಊಹಾ-ಕಲ್ಪನೆಗಳು ಕೂಡಿಕೊಳ್ಳಲಿಲ್ಲ. 'ಬ್ಯಾರಿ' ಸಹೋದರರ ಅಭಿಪ್ರಾಯದಲ್ಲಿ ಕೆಲ ವಿಜ್ಞಾನಿಗಳಿಗೆ ಕೇವಲ ಪ್ರಯೋಗಪರಿಶೀಲನೆ ಪರಿಶೋಧನೆಗಳು ಅಷ್ಟು ತ್ರಾಸದಾಯಕವಾಗುವುದಿಲ್ಲ. ಆದರೆ ಕೇಂದ್ರೃಕೃತ ಕಲಾತ್ಮಕ ಚಿಂತನ-ಮಂಥನ, ಕಲ್ಪನೆಗಳು ಹೆಚ್ಚು ತ್ರಾಸದಾಯಕ ವಾಗುವುವು. ಆದ್ದರಿಂದ ವೈಜ್ಞಾನಿಕ ಸಂಶೋಧನೆಗಳಲ್ಲಿ ಕಲಾತ್ಮಕರೀತಿಯ ಊಹಾಕಲ್ಪನೆಗಳೂ ಮಹತ್ವದ ಪಾತ್ರವಾಗುತ್ತವೆ. ಎಂಬುದಕ್ಕೆ "ವ್ಯಾಟ್ಸನ್" ಮತ್ತು "ಕ್ರಿಕ್" ಅವರು D. N. A. ಅಣುವಿನ ರಚನೆಯ ಮೇಲೆ ನಡೆಸಿದ ಕಾರ್ಯವೇ ಒಂದು ಉತ್ತಮ ನಿದರ್ಶನ, ಮತ್ತು ಸಾಕ್ಷಿ. ವಿಜ್ಞಾನದ ವಿವಿಧ ಶಾಖೆಗಳಿಂದ ಇಂತಹ ಇನ್ನೂ ನೂರಾರು ನಿದರ್ಶನಗಳನ್ನು ಹೆಕ್ಕಿತೆಗೆಯಬಹುದು. ಇತ್ತಿತ್ತಲಾಗಿ "ಲೆನ್ನಾರ್ಟ್ ನಿಲ್ಸನ್" ಎಂಬ ಅಮೇರಿಕ ದೇಶದ ಒಬ್ಬ ಕಲಾಕಾರನು ಒಬ್ಬ ಶ್ರೇಷ್ಠ ವೈದ್ಯ ವಿಜ್ಞಾನಿಯೊಂದಿಗೆ ಕಾರ್ಯಮಾಡುತ್ತಾ, ಮಾನವನ ಮಿದುಳಿನ ಚಮತ್ಕಾರ ರಹಸ್ಯಗಳನ್ನು 'ಮೈಕ್ರೊ ಫೋಟೋಗ್ರಫಿ' ಎಂಬ ತಾಂತ್ರಿಕ ರೀತಿಯಿಂದ ಚಿತ್ರಿಸುವಲ್ಲಿ ತೊಡಗಿದ್ದಾನೆ.

ವಿಜ್ಞಾನಾಸಕ್ತ ಮನಸ್ಸು ಮತ್ತು ಕಲಾಸೃಷ್ಟಿಯುಳ್ಳ ಹೃದಯ ಇವೆರಡೂ ಒಂದು ವ್ಯಕ್ತಿಯಲ್ಲಿ ಕೂಡಿದ್ದರೆ, ಆಗ ಏನಾಗಬಹುದು ಎಂಬುದನ್ನು ಕಲ್ಪಿಸಿಕೊಳ್ಳಬಹುದು, ಹೀಗೆ ವಿಜ್ಞಾನ ಮತ್ತು ಕಲೆ ಎಂಬುವು ಎರಡು ಪ್ರತ್ಯೇಕ ಪರ್ವತ ಶಿಖರಗಳೆನಿಸಿದರೂ, ಅವುಗಳಿಗೆ ಒಂದೇ ಭೂಮಿಕೆ ಅಥವಾ ನೆಲೆಗಟ್ಟು ಇರುತ್ತದೆ. ಆದರೆ ಈ ಎರಡು ಪ್ರತ್ಯೇಕ ಹಾಗೂ ಭಿನ್ನವಾಗಿ ತೋರುವ ಶಿಖರಗಳ ನಡುವೆ ಒಂದು ಸಂಬಂಧ-ಸಹಕಾರ ನಿರ್ಮಿಸಬೇಕಾಗಿದೆ. ಈ ಎರಡೂ ಕ್ಷೇತ್ರಗಳಲ್ಲಿರುವ ತಜ್ಞರು ತಮ್ಮ ತಮ್ಮ ಅನುಭವಗಳನ್ನು ವಿನಿಮಯಮಾಡಿಕೊಳ್ಳುವಕಾಲ ಈಗ ಸನ್ನಿಹಿತವಾಗಿದೆ. ಆಗ ತೋರಿಕೆಗೆ ಕಂಡುಬರುವ ಭಿನ್ನತೆ ಅಥವಾ ವ್ಯತ್ಯಾಸ ಮಾಯವಾಗುತ್ತದೆ.

ಇಲ್ಲಿ ಮತ್ತೂ ಒಂದು ನಿದರ್ಶನವನ್ನು ಗಮನಕ್ಕೆ ತಂದುಕೊಳ್ಳಬಹುದು ಉದಾಹರಣೆ ಡಾ|| ಭಾಭಾ ಆಧುನಿಕ ವಿಜ್ಞಾನದಲ್ಲಿ ಒಬ್ಬ ಶ್ರೇಷ್ಠ ವಿಜ್ಞಾನಿ ಎಂಬುದು ಎಲ್ಲರಿಗೂ ಗೊತ್ತಿದೆ. ಆತನ ವ್ಯಕ್ತಿತ್ವವನ್ನು ಅರ್ಥಮಾಡಿಕೊಳ್ಳಬೇಕಾದರೆ ಆತನು ರೂಪಿಸಿದ ಅಣುಶಕ್ತಿ ಸಂಶೋಧನಾ ಮಂದಿರವನ್ನು ನೋಡಬೇಕು. ಆತನು ವಿಜ್ಞಾನಿಯಾಗಿ ಸಾಧಿಸಿದ ಸಾಧನೆಗಳಿಷ್ಟರಿಂದಲೇ ಆತನ ವ್ಯಕ್ತಿತ್ವದ ಅರಿವು ಪೂರ್ಣವಾಗುವುದಿಲ್ಲ. ಭಾಭಾ ಅಣು ಸಂಶೋಧನಾಲಯದಲ್ಲಿ ಅದ್ವಿತೀಯ ಕಲಾಪ್ರೌಢಿಮೆಯುಳ್ಳ ಚಿತ್ರಗಳೂ ಇವೆ. ಅವು ಭಾಭಾ ಅಂತಹ ವಿಜ್ಞಾನಿಯ ಕಲಾಪೂರ್ಣ ಮನಸ್ಸಿನ ಹಿರಿಮೆಯನ್ನೂ ಬಿಂಬಿಸುತ್ತವೆ. ಆತನೆ ವಿಜ್ಞಾನ ಪ್ರಗತಿಯಲ್ಲಿ ಕಲೆಗೂ ಒಂದು ಹಿರಿಯಸ್ಥಾನದ ಅವಶ್ಯಕತೆ ಮತ್ತು ಪ್ರಾಮುಖ್ಯತೆ ಇರುತ್ತದೆಯೆಂದು ಬಾರಿಬಾರಿಗೆ ಹೇಳುತ್ತಿದ್ದುದುಂಟು. ಆತನ ಕಲಾಪೂರ್ಣ ಮತ್ತು ಕಲ್ಪನಾತ್ಮಕ ಮನಸ್ಸು ಎಲ್ಲಬಗೆಯ ಸೀಮಾರೇಖೆಗಳನ್ನೂ ಮೀರಿತ್ತು. ಆದ್ದರಿಂದಲೇ ಆತನಿಗೆ ಪರಮಾಣುಗಳಲ್ಲಿ ಮತ್ತು ಅಣುಜಗತ್ತಿನಲ್ಲಿ ಸರಾಗವಾದ ಪ್ರವೇಶ ದೊರೆತಂತಾಯಿತು

ಒಟ್ಟಿನಲ್ಲಿ ಹೇಳುವುದಾದರೆ ವಿಜ್ಞಾನ ಮತ್ತು ಕಲೆ ಎಂಬುವು ಪರಸ್ಪರ ಪೂರಕವಾಗಿಯೇ ಇವೆ. ಅವುಗಳನಡುವೆ ಯಾವುದೇ ಬಗೆಯ ಭಿನ್ನತೆ ಅಥವಾ ಅಂತರವನ್ನು ಕಲ್ಪಿಸಿಕೊಳ್ಳುವುದು ಅನವಶ್ಯಕ: ಅನಗತ್ಯ, ಅಸಾಧ್ಯ ಮತ್ತು ಅಹಿತ. ಇವೆರಡೂ ಮಾನವನಲ್ಲಿ ಜತೆ ಜತೆಯಾಗಿ ಕೂಡಿ ಹೆಜ್ಜೆ ಹಾಕಿದರೆ, ಅವು ಮಾನವನ ಅವನತಿಯನ್ನು ತಪ್ಪಿಸಬಹುದಷ್ಟೇ ಅಲ್ಲದೆ, ಅವನ ಪ್ರಗತಿಯನ್ನು ಸಾಧಿಸಲು ಬಹು ಉಪಯುಕ್ತವೂ ಮಹತ್ವವುಳ್ಳವೂ ಆಗಿರುತ್ತವೆ,

—

( 21 ನೇ ಪುಟದಿಂದ )

ಕಾಮಿಕರಿಗೆ ಕಾಮಧೇನುವಾಗಿ, ಅಜ್ಞಾನದ ಅಂಧರಿಗೆ ಬೆಳಕಿನ ಕಣ್ಣುಗಳನ್ನಿತ್ತು ದಿವಾಕರರಾದರು ! ಇಂತಹ ಶರಣಬಸವೇಶ್ವರರು ತಮ್ಮ ಅವಸಾನಕಾಲದ ಮಿತಿಯನ್ನು ಶ್ರೀ ದೊಡ್ಡಪ್ಪಗೌಡರಿಗೆ ಮುಂಚಿತವಾಗಿಯೇ ತಿಳಿಸಿದ್ದರೆಂಬುವದರಲ್ಲಿಯೂ ಏನೂ ಆಶ್ಚರ್ಯವಿಲ್ಲ. ಆ ಪ್ರಕಾರ ಶರಣರು ಶಾಲಿವಾಹನ ಶಕೆ ೧೭೪೪ ನೆಯ ( ಕ್ರಿ. ಶ. ೧೮೨೨ ) ಚಿತ್ರಭಾನು ಸಂವತ್ಸರ ಫಾಲ್ಗುಣ ವದ್ಯ ಪ್ರತಿಪದೆ ಗುರುವಾರ ಉತ್ತರಾ ನಕ್ಷತ್ರ ರಾತ್ರಿ ೧೨ ಗಂಟೆಗೆ ಲಿಂಗೈಕ್ಯರಾದರು. ಅವರು ಅಂದು ಲಿಂಗ ಪೂಜೆಯ ಕಾಲಕ್ಕೆ ಬೆಳಗಿಸಿದ ನಂದಾದೀಪವು ಇಂದಿಗೂ ಅಖಂಡ ಜ್ಯೋತಿಯಾಗಿ ಬೆಳಗುತ್ತಿದೆ. ಇದಲ್ಲದೆ ಅವರು ತಮ್ಮ ಜೀವಿತಕಾಲದಲ್ಲಿ ಉಪಯೋಗಿಸುತ್ತಿದ್ದ ಪ್ರಸಾದ ಬಟ್ಟಲು, ಲಿಂಗಶಜ್ಜಿಕೆಗಳು ಈ ಕಣ್ಣುಗಳಿಗೆ ನೋಡಲು ಸಿಕ್ಕುತ್ತವೆ. ಅವು ದಾಸೋಹದ ಮಹಾಮನೆಯಲ್ಲಿ ಇಂದಿಗೂ ಅಲ್ಲಿಗೆ ಬಂದ ಭಕ್ತಾದಿಗಳಿಗೆ ಸಮೃದ್ಧಿ, ಸ್ಫೂರ್ತಿ, ಜೀವನಸಿದ್ಧಿ ಮೊದಲಾದವುಗಳನ್ನು ನೀಡುತ್ತ ಕಂಗೊಳಿಸುತ್ತವೆ.

ಶರಣಬಸವೇಶ್ವರರು ಗುರುಭಕ್ತಿ ಪಾರಾಯಣರು ಕ್ಷಣ ಕ್ಷಣಕ್ಕೂ ಗುರುಕಾರುಣ್ಯವನ್ನು ನೆನೆಸಿಕೊಳ್ಳುವ ಶ್ರೇಷ್ಠ ಶರಣರು. ಅಂತೆಯೇ ಶರಣರು ಲಿಂಗೈಕ್ಯರಾಗುವ ಮುನ್ನ ತಮ್ಮ ಶಿಷ್ಯರಿಗೆ, ತಮ್ಮ ಅವಸಾನದ ನಂತರ ತಮ್ಮ ಸಮಾದಿಯಮೇಲೆ ತಮ್ಮ ಗುರು ಶ್ರೀ ಪಾದುಕೆಗಳನ್ನಿಟ್ಟು ಪೂಜಿಸಬೇಕೆಂದು ಸೂಚಿಸಿದ್ಧರು. ಆ ಪ್ರಕಾರ ಶರಣರ ಸಮಾಧಿಯ ಮೇಲೆ ಗುರು ಶ್ರೀ ಪಾದುಕೆಗಳೊಡನೆ ಅವರ ಗುರುಗಳಾದ ಮರುಳಸಿದರು. ಮೂರ್ತಿಯನ್ನೂ ಶರಣರ ಶಿಷ್ಯರು ಪ್ರತಿಷ್ಠಾಪಿಸಿದ್ದಾರೆ. ಹೀಗೆ ನಾವು ಇಂದು ಶರಣರ ದರ್ಶನಕ್ಕೆಂದು ಕಲಬುರಗಿಗೆ ಹೋದರೆ ಅಲ್ಲಿ ನಮಗೆ ಗುರುಕಾರುಣ್ಯ ಹಾಗೂ ಶರಣರ ಸರೋಜ ಪ್ರಸಾದ ಎರಡೂ ಒಮ್ಮೆಗೆ ಒಂದೇ ಸಮಾದಿಯಲ್ಲಿ ದೊರೆತು ಹೃದಯಕ್ಕೆ ಚಿರಂತರವಾದ ಸಮಾಧಾನ ಲಾಭವಾಗುತ್ತದೆ. ಮತ್ತೆ ನಾವು ಅಲ್ಲಿ ಶರಣರಲ್ಲಿದ್ದ ಆದರ್ಶ ಗುರುಭಕ್ತಿಗೆ ಮಣಿದು ಭಕ್ತಿಗಂಗೆಯಲ್ಲಿ ಮಿಂದು ನಮ್ಮ ಮನಸ್ಸು ಜಗದೊಳಗಿನ ಎರಡನ್ನು ಬಿಟ್ಟು ಒಂದನ್ನು ಹುಡುಕಲು ಆರಂಭಿಸಿ- ಅದನ್ನು ಪಡೆದು ಧನ್ಯವಾಗುತ್ತಿದ್ದೆ.

ಶರಣರ ನಂತರ ಉತ್ತರಾಧಿಕಾರಿಗಳಾಗಿ ಶ್ರೀ ದೊಡ್ಡಪ್ಪಗೌಡರೆ ಶರಣರ ಮುನ್ಸೂಚನೆಯಂತೆ ನಿಂತು ಸುಮಾರು 30 ವರ್ಷಗಳವರೆಗೆ ಅಖಂಡ ದಾಸೋಹವನ್ನು ನಡೆಯಿಸಿ ಧರ್ಮದ ನಂದಾದೀಪವನ್ನು ಬೆಳಗಿಸಿದರು. ಅವರಿಬ್ಬರ ಅನ್ಯೋನ್ಯತೆಯ ಪ್ರತೀಕವೇ ಎಂಬಂತೆ ಶಿವನ ಮುಂದೆ ನಂದಿಯು ಇರುವಂತೆ; ದೊಡ್ಡಪ್ಪಗೌಡರ ಸಮಾಧಿಯು ಶರಣರ ಸಮಾಧಿಯ ಮುಂದೆ ಇಂದಿಗೂ ಭಕ್ತಾದಿಗಳಿಗೆ ಶರಣ ಕೃಪೆಯನ್ನು ಪ್ರತಿನಿಧಿಸುತ್ತ ಕಂಗೊಳಿಸುತ್ತಿದೆ. ಇದಲ್ಲದೆ ಶರಣರ ಮತ್ತೊಬ್ಬ ಪರಮ ಶಿಷ್ಯ ರಾಮಜಿ ಎಂಬುವನು ಶಾಲಿವಾಹನ ಶಕೆ ೧೭೫೩ ಮನ್ಮಥನಾಮ ಸಂವತ್ಸರದಲ್ಲಿ ಕಾಲವಾದ ಮೇಲೆ ಆತನ ಸಮಾಧಿಯನ್ನು ಶರಣರ ತಪೋಭೂಮಿಯ ಸಾಮಿಪ್ಯದಲ್ಲಿಯೇ ಬ್ರಹ್ಮಪುರದಲ್ಲಿ ಕಟ್ಟಲಾಗಿದೆ. ಆತನ ಸಮಾಧಿಗೆ ಮಳೆಗಾಗಿ ನಡೆದುಕೊಂಡರೆ ತಪ್ಪದೇ ಅನುಕೂಲವಾಗುವಂತೆ ಮಳೆಯು ಆಗುತ್ತದೆ. ಈ ನಂಬಿಕೆಯನ್ನು ಇಂದಿಗೂ ಜನರು ಇಟ್ಟುಕೊಂಡಿದ್ದಾರೆ. ಹಾಗೆಯೇ ಅದರಿಂದ ಮಳೆಯನ್ನು ಪಡೆದು ಹಿಗ್ಗಿನ ಸುಗ್ಗಿಯನ್ನೂ ಪಡೆದಿದ್ದಾರೆ. ಹೀಗೆ ಶರಣರಂತೆ ಶರಣರ ಶಿಷ್ಯಕೋಟಿಯು ಜಗತ್ತಿನ ಕಲ್ಯಾಣಕ್ಕಾಗಿ ತಮ್ಮ ಮಹಿಮೆಗಳನ್ನು ಮೀಸಲಿಟ್ಟಿರುವುದನ್ನು ನೋಡಿದರೆ ಶರಣ ಬಸವೇಶ್ವರರು ದಾಸೋಹದ ಮಹಾಪ್ರಸಾದದ ಮಹಿಮೆ ಎಂದು ಅರಿಯಬಹುದು. ಇದು ಶರಣ ಬಸವೇಶ್ವರರ ಮಟ್ಟಿಗೆ ಉಳಿಯಲಿಲ್ಲ. ತತ್ ಪರಿಣಾಮವಾಗಿ ಅವರನ್ನು ಬಳಸಿದ ಸುತ್ತಮುತ್ತಲಿನ ವಾತಾವರಣವೆಲ್ಲಾ ಪರಿಶುದ್ಧವಾಯಿತು. ಅಂತೆಯೇ ಶರಣ ಬಸವೇಶ್ವರರು ತಾವೂ ದಾರ್ಶನಿಕರಾಗಿ ಬಾಳಿ, ಉಳಿದವರೂ ಅಂತೆಯೇ ಬಾಳಲು ಎಡೆಮಾಡಿಕೊಟ್ಟ ಪರಮಾತ್ಮನ ಅಪರಾವತಾರವೆಂದೇ ಅವರನ್ನು ಬಗೆಯಬೇಕು. ಸಾಧನ ಜೀವಿಗಳ ಸಂಜೀವಿನಿ ಶಕ್ತಿಯ ಚೈತನ್ಯಸ್ವರೂಪವೆಂದೇ ನಂಬಿ ಭಕ್ತಿಯಿಂದ ಅವರಿಗೆ ನಮಿಸಿ ಪಾವನರಾಗಬೇಕು.

ಇಂದಿಗೂ ಶರಣರ ನಂದಾದೀಪದ ಬೆಳಕಿನ ಸದ್ಯದ ಶರಣ ಬಸವೇಶ್ವರರ ಸಂಸ್ಥಾನಾಧಿಪತಿಗಳಾದ ಪೂಜ್ಯ ದೊಡ್ಡಪ್ಪ ಅಪ್ಪಾ ಅವರೂ ಹಾಗೂ ಅವರ ಸತ್ಪುತ್ರರಾದ ಪೂಜ್ಯ ಶ್ರೀ ಶರಣಬಸಪ್ಪ ಅಪ್ಪಾ ಅವರೂ ಅವ್ಯಾಹತವಾಗಿ ಶಿವಕಾರುಣ್ಯವನ್ನು ಮೆರೆಯುತ್ತ

ಪ್ರಸಾದ ದಾಸೋಹದ ಜೊತೆಗೆ ಅನೇಕ ಸಂಸ್ಥೆಗಳನ್ನು ಕಟ್ಟಿ ಜನತೆಯ ಹೃದಯಗಳಿಗೆ ಜ್ಞಾನಪ್ರಸಾರ ದಾಸೋಹವನ್ನು ನೀಡುತ್ತಿದ್ದಾರೆ. ಆ ಮೂಲಕ ಅಜ್ಞಾನದ ಅಂಧಃಕಾರವೆಲ್ಲ ದೂರದೂರ ಸರಿಯುತ್ತ ಜ್ಞಾನದ ಬೆಳಕು ತುಂಬಿ ಸೂಸತೊಡಗಿದೆ. ಆ ಮಂಗಳ ಬೆಳಕು ನಂಬಿದವರನ್ನು ಕೈಬಿಡಿದೆ ಭೀಮರಕ್ಷೆಯಾಗಿ ಬೆಳಗಿಸುತ್ತಿದೆ. ★

---

[19 ನೇ ಪುಟದಿಂದ]

ಮತ್ತೊಂದೆಡೆ ಅಶೋಕನ ಜೊತೆ ಇದ್ದ ಸ್ನೇಹವನ್ನು ಮಗಳು ಈಗ ಒಪ್ಪಿಕೊಂಡಳಲ್ಲಾ ಎನ್ನುವ ಕುದಿ.... ಹೊರಗೆ ಮಾತು, ಶಿಕ್ಷೆ ಬೇಡವೆಂದು ಮಗಳನ್ನು ಕರೆದೊಯ್ಯುವುದರಲ್ಲಿ ರಾಜ ದಾವಿಸಿ ಬಂದವನೇ ಸೈಕಲ್ ನಿಲ್ಲಿಸಿದ.

" ಹೇಮಾ, I am very sorry. .... ಆಶೋಕ್ ಹೋಗಿಬಿಟ್ನಂತೆ.... ನಿಮ್ಮನ್ನ ಹುಡಿಕ್ಕೊಂಡು ನೀರಜನ ಮನೆ ಬಳಿ ಹೋಗಿದ್ದೇ ತಿಳೀತು....ಪಾಪ ಹಾಗ್ಬಾರ್ದಿತ್ತು "....

ಹೇಮಾ ಅಳುತ್ತಾ ಕಣ್ಣೊರೆಸಿಕೊಂಡಾಗ, ಕಮಲಮ್ಮ ಆತುರದಿಂದ ಮಗನನ್ನು ಕೇಳಿದರು-

" ಅಶೋಕ್ ಅಂದ್ರೆ ಯಾರೋ ರಾಜ...."?

" ನೀರಜನ ಮೂರು ವರ್ಷದ ತಮ್ಮ.... ಎಷ್ಟೊಂದು ಮುದ್ದಾಗಿದ್ದ ಹುಡುಗ ಅಂತೀ.... ಪಾಪ ಶುದ್ಧ ಅನ್ಯಾಯ. " ††††

---

[9 ನೇ ಪುಟದಿಂದ]

ಕೋನ ರೂಪುಗೊಂಡಿತು. ಹಾಲು ಬಟ್ಟಲು, ಶಿಕ್ಷೆಯ ಬೆತ್ತ ಹಿಡಿದ ದೇವನಂತೆ ಪ್ರೀಯೋರ್ವನೂ ವಿನಯ ವೀರತ್ವ; ಮಾನವೀಯತೆ–ತತ್ವನಿಷ್ಠೆಗಳ ಸಂಗಮವಾಗ ಬೇಕೆಂಬ ನೀತಿಶಾಸ್ತ್ರ ಮೈದಳೆಯಿತು. ಸಮಾಜದ ಶ್ರೇಯಸ್ಸಿಗೆ ವ್ಯಕ್ತಿ ವಿನಯ ಶೀಲನಾದಂತೆ, ಅಲ್ಲಿಯ ಲೋಪದೋಷಗಳ ನಿರ್ಮೂಲನೆಗೆ ದಿಟ್ಟನೂ ಆಗಬೇಕು ಎಂಬ ವಿನೂತನ ಸಂದೇಶ ರೂಹುತಾಳಿತು. ಶ್ರೀ ಸಾಮಾನ್ಯನ ಸಮಗ್ರ ವಿಕಾಸಕ್ಕೆ ಸಾಧನವಾಗುವ ತತ್ವಗಳಿಂದ ಕೂಡಿದ ಪರಿಪೂರ್ಣ ಧರ್ಮವಿದರ ಮೂಲ ಭೂತ ತತ್ವ–ಶರಣರು ನೀಡಿದ ಅಪೂರ್ವವಾದ ದೇವರ ಕಲ್ಪನೆ.

---

[13 ನೇ ಪುಟದಿಂದ]

ಆದರೆ ನಾನು ಈಗ ಮಾತನಾಡುತ್ತಿರುವುದು ನಮ್ಮ ರಚನಾತ್ಮಕ ಶಕ್ತಿಗೆ ಆಹ್ವಾನವೀಯುವಂಥ ಜಗತ್ತಿನ ಸಾಂಸ್ಕೃತಿಕ ಅಥವಾ ವಾಸ್ತವಿಕ ಸಂಪತ್ತನ್ನು ಹೆಚ್ಚಿಸುವ ನಮ್ಮ ಸುತ್ತಲಿನ ಜನರಿಗೆ ಕಿಂಚಿತ್ತಾದರೂ ಸಹಾಯವಾಗುವ ಕೆಲಸದ ಬಗ್ಗೆ ನಾನು ಮಾತನಾಡುತ್ತಿದ್ದೇನೆ. ಇಂಥ ಕೆಲಸವನ್ನು ಉದಾತ್ತ ಮನೋಭಾವನೆಯಿಂದ ಆದರೆ ಉದ್ದೇಶವನ್ನು ಚೆನ್ನಾಗಿ ಅರಿತು ಅದನ್ನು ಉತ್ಸಾಹದಿಂದ ಕಾರ್ಯಕ್ರಮತೆಯಿಂದ ಸಮರ್ಥವಾಗಿ ಮಾಡಿದರೆ ಮಾತ್ರ ಅದು ಫಲಕಾರಿಯಾಗುತ್ತದೆ. ಯಾವ ಮನುಷ್ಯ ತನ್ನ ಜೀವನದಲ್ಲಿ ತನ್ನ ಪಾಲಿಗೆ ಬಂದ ಕಾರ್ಯವನ್ನು ಆಲಸ್ಯದಿಂದ, ಬೇಸರಿಕೆಯಿಂದ ಮಾಡುತ್ತಾನೆಯೊ, ಯಾವನು ತನ್ನ ಪೂರ್ಣ ಮನಸ್ಸನ್ನೂ ಪ್ರತಿಭೆಯನ್ನೂ ಅದರಲ್ಲಿ ತೊಡಗಿಸಲು ಅಸಮರ್ಥನಾಗುತ್ತಾನೋ. ಯಾವ ಕಾರ್ಯವೇ ಆಗಲಿ ಅದಕ್ಕಾಗಿ ನಾವು ನಮ್ಮ ವೇಳೆ ಹಾಗೂ ಶಕ್ತಿಯನ್ನು ವಿನಿಯೋಗಿಸಲು ಅರ್ಹನೆಂದ್ರು ಬಗೆದು ಕೈಗೊಂಡಿರುತ್ತೇವೆಯೋ ಆ ಕಾರ್ಯ ಒಳ್ಳೆ ರೀತಿಯಿಂದ ಮಾಡಲು ತಕ್ಕುದಾಗಿಯೇ ಇರುತ್ತದೆ. ಎಂಬುದನ್ನು ಯಾವಾತ ಅರಿತಿರುವುದಿಲ್ಲವೊ ಅಂಥ ಮನುಷ್ಯ ಬದುಕಿನ ಸುಖದ ಉನ್ಮಾದವನ್ನು ಎಂದೂ ಅನುಭವಿಸಲಾರ. ಜೀವನದಲ್ಲಿ ಯಶಸ್ಸು, ನೆಮ್ಮದಿ ಸುಖಗಳನ್ನು ಅನುಭವಿಸಲು ಇನ್ನೊಂದು ಸಾಧನೆಯೆಂದರೆ ಸಮಯ ನಿಷ್ಟತೆ. ಸಮಯದ ಮಹತ್ವವನ್ನು ಅರಿಯದ ಮನುಷ್ಯ ಏನನ್ನೂ ಸಾಧಿಸಲಾರ. ಹೋದ ಸಮಯ ಎಂದಿಗೂ ತಿರುಗಿ ಬರುವದಿಲ್ಲ ಎಂದು ಸಂಸ್ಕೃತ ಸುಭಾಷಿತವೊಂದು ಹೇಳುತ್ತದೆ.

### ಕಾಲದ ಮಹತ್ವ

" ಆಯುರ್ನಶ್ಯತಿ ಪಶ್ಯತಂ ಪ್ರತಿದಿನಂ ಯಾತಿಕ್ಷಯಂ ಯೌವನಂ

ಪ್ರತ್ಯಾಯಾಂತೀ ಗತಾಃ ಮನರ್ನ ದಿವಸಃ ಕಾಲೋ ಜಗದ್ಭಕ್ಷಕಃ "

ಸಮಯವನ್ನು ಗೊಡ್ಡು ಹರಟಗಾಗಿ, ಮಂಡಲಾಲಿಪ ವಿಚಾರಗೋಷ್ಠಿಗಾಗಿ ವಿಲಾಸದ ಕ್ಲಬ್ಬುಗಳಲ್ಲಿ

( ಮುಂದುವರಿದುದು )

## "ಶಿವಗಂಗಾ" ಚಿರಾಯುವಾಗಲೆಂದು

### ಹರಸಿ ಹಾರೈಸುವ ಆಜೀವ ಸದಸ್ಯರುಗಳು

305 ಶ್ರೀ ಜಿ. ಬಿ. ಶಿವಣ್ಣ, ಶಿಕ್ಷಕರು
ಗುಬ್ಬಿ, ತುಮಕೂರು ಜಿಲ್ಲೆ

306 ಶ್ರೀ ಎಂ. ಎಸ್. ಗುರಪ್ಪ, ಶಿಕ್ಷಕರು
ಎಸ್. ಮತಿಘಟ್ಟ, ಗುಬ್ಬಿ ತಾ||

307 ಶ್ರೀ ಹೆಚ್. ಹೊಂಜಯ್ಯ, ಶಿಕ್ಷಕರು
ತೋಟಸಾಗರ, ಗುಬ್ಬಿ ತಾ||

308 ಶ್ರೀ ಶಂಕರಯ್ಯ,
ಅಮ್ಮನಘಟ್ಟ, ಗುಬ್ಬಿ ತಾ||

309 ಕೆ. ಬಿ. ಗಂಗಣ್ಣ, ಶಿಕ್ಷಕರು
ಗುಬ್ಬಿ, ತುಮಕೂರು ಜಿಲ್ಲೆ.

310 ಶ್ರೀ ಎಸ್. ಹೆಚ್. ರಾಜಶೇಖರಯ್ಯ, ಶಿಕ್ಷಕರು
ಗುಬ್ಬಿ, ತುಮಕೂರು ಜಿಲ್ಲೆ.

311 ಶ್ರೀ ಆನಂದಮೂರ್ತಿ, ಶಿಕ್ಷಕರು
ಬಂಗ್ಲೆಪಾಳ್ಯ, ಗುಬ್ಬಿ ತಾ||

312 ಶ್ರೀ ಹೆಚ್. ಪಿ. ಸಿದ್ದಲಿಂಗಪ್ಪ, ಶಿಕ್ಷಕರು
ಹೊಸಕೆರೆ, ಗುಬ್ಬಿ ತಾ||

313 ಶ್ರೀ ಎಸ್. ಎಲ್. ಸಿದ್ಧರಾಮಯ್ಯ, ಶಿಕ್ಷಕರು
ಸೋಪನಹಳ್ಳಿ, ಗುಬ್ಬಿ ತಾ||

314 ಶ್ರೀ ಟಿ. ಎಸ್. ಶಿವಣ್ಣ, ಶಿಕ್ಷಕರು
ತೋಟಸಾಗರ, ಗುಬ್ಬಿ ತಾ||

315 ಶ್ರೀ ಎ. ಆರ್. ರೇಣುಕಾರಾಧ್ಯ, ಶಿಕ್ಷಕರು
ಮೊಷ್ಟಗುಣಿ, ಗುಬ್ಬಿ ತಾ||

316 ಶ್ರೀ ಡಿ. ಗೋಪಾಲ್
ಕನಕಪುರ, ಬೆಂಗಳೂರು ಜಿಲ್ಲೆ.

317 ಶ್ರೀ ಎಂ. ಶಿವಣ್ಣ,
ಬೂದಿಗೆರೆ, ಬೆಂಗಳೂರು ಜಿಲ್ಲೆ.

318 ಶ್ರೀ ಶಿವರಾಜಪ್ಪ,
ಬೂದಿಗೆರೆ, ಬೆಂಗಳೂರು ಜಿಲ್ಲೆ.

319 ಶ್ರೀ ಹೆಚ್. ಕೆ. ಸಿದ್ದಾಪುರ್,
ಬಿಳಗುಲಿ, ಮುಧೋಳ್ ತಾ||
ಬಿಜಾಪುರ ಜಿಲ್ಲೆ.

320 ಶ್ರೀ ಅಲ್ಲಪ್ಪಗೌಡ ಪಟೀಲ್,
ಬಿಳಗುಲಿ, ಮುಧೋಳ್ ತಾ||
ಬಿಜಾಪುರ ಜಿಲ್ಲೆ.

321 ಶ್ರೀ ಎಸ್. ಹೆಚ್. ಕುಲಕರ್ಣಿ.
ಬಿಳಗುಲಿ, ಮುಧೋಳ್ ತಾ||
ಬಿಜಾಪುರ ಜಿಲ್ಲೆ.

322 ಶ್ರೀ ಎಸ್. ರಾಮಪ್ಪ ಮೆಣಸಿನಕಾಯಿ
ಬಿಳಗುಲಿ, ಮುಧೋಳ್ ತಾ||
ಬಿಜಾಪುರ ಜಿಲ್ಲೆ.

323 ಗ್ರಾಮಪಂಚಾಯಿತಿ ಕಛೇರಿ,
ಕುಳಲಿ ಮುಧೋಳ್ ತಾ||
ಬಿಜಾಪುರ ಜಿಲ್ಲೆ.

324 ಶ್ರೀ ಡಿ. ಚಂದ್ರಪ್ಪ,
ದಾವಣಗೆರೆ.

( ಮುಂದುವರೆಯುದು )

"SIDDAGANGA" Monthly, Sree Siddaganga Mutt. KRN Q-
Registered with the Registrar of News papers for India under No. 17139/



ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಮಠ.